ಮನೋರಂಜನ ಗ್ರಂಥಮಾಲಾ, ಪುಷ್ಪ ೧

# ಅಳು—ನಗು

(ಐದು ಕತೆಗಳು)

---

ಮನೋರಂಜನ ಸಂಘ, ಮಂಗಳೂರು

---

1936



 [ಬೆಲೆ ನಾಲ್ಕಾಣೆ

# ಮುನ್ನುಡಿ

ಸಾಹಿತ್ಯ ಪ್ರಿಯರೇ,

ಸಾಹಿತ್ಯ ಪ್ರಪಂಚದಲ್ಲಿ ಎಳೆಯರ ಸೇವೆಯಿದು. ಈ ಮಹತ್ಕಾರ್ಯವನ್ನು ಹಿರಿಯರ ಕೊಡುಗೈ ನೆರವಾಗಬಹುದೆಂಬ ಸಂಪೂರ್ಣ ಭರವಸೆಯಿಂದಲೇ ಕೈಗೊಂಡಿದ್ದೇವೆ. ಪ್ರಕೃತ ಈ 'ಅಳು ನಗು' ಎಂಬ ಪ್ರಥಮ ಪುಷ್ಪವನ್ನು ನಿಮ್ಮ ಕೈಗಳಲ್ಲಿ ಅರ್ಪಿಸಿರುತ್ತೇವೆ.

ಕಳೆದ ಎರಡು ವರ್ಷಗಳಿಂದ ನಮ್ಮ ಮನೋರಂಜನ ಸಂಘವು ಭಾಷಣ ಮತ್ತು ಹಸ್ತಲಿಖಿತ ಮಾಸಿಕಪತ್ರಿಗಳ ಮೂಲಕವಾಗಿ ಸಾಹಿತ್ಯ ಮಾತೆಯ ಚರಣತಲದಲ್ಲಿ ಅಳಿಲ ಸೇವೆಯನ್ನರ್ಪಿಸುತ್ತಲಿರುವುದು ಎಲ್ಲರಿಗೂ ತಿಳಿದ ವಿಷಯ. ಅದೇ ಸಂಘದ ಕವಲು "ಮನೋರಂಜನ ಗ್ರಂಥ ಪ್ರಕಾಶನ ಸಮಿತಿ" ಎಂಬ ಹೆಸರಿನಿಂದ ಪುಸ್ತಕ ಪ್ರಕಾಶನವನ್ನಾರಂಭಿಸಿದೆ. ಇದಕ್ಕೆ ಹಿರಿಯರ ಸಹಾನುಭೂತಿಯೂ ಆಶ್ರಯವೂ ಕಿರಿಯರ ಪ್ರೋತ್ಸಾಹವೂ ದೊರಕೀತೆಂದು ನಂಬಿದ್ದೇವೆ.

ಈ ಸಂಗ್ರಹದಲ್ಲಿನ ನಡುವಿನೆರಡು ಕಥೆಗಳು (ರಾಧೆಯ ಭಾಗ್ಯ ಮತ್ತು ಶಾಂತಿ) ಈ ಮೊದಲೇ 'ರಾಷ್ಟ್ರಬಂಧು'ವಿನ ಸಾಹಿತ್ಯ ಸಂಚಿಕೆಗಳಲ್ಲಿ ಪ್ರಕಟವಾಗಿದ್ದವು; ಪತ್ರಿಕೆಯ ಸಂಪಾದಕರಿಗೆ ಚಿರಋಣಿಯಾಗಿದ್ದೇವೆ.

ಇತಿ<br>
ಕನ್ನಡಿಗರಡಿಯಾಳು,<br>
ಯನ್. ಕೃಷ್ಣ ಉಪಾಧ್ಯಾಯ.



# ಪರಿವಿಡಿ

---


೧. ಪಶ್ಚಾತ್ತಾಪ .... .... ಶ್ರೀ। ಟಿ. ಗೋಪಾಲಕೃಷ್ಣಭಟ್.

೨. ಮುರಿದ ಮುರಲಿ .. ಶ್ರೀ। ಯಮ್. ರಮಾನಂದ ಘಾಟಿ.

೩. ರಾಧೆಯ ಭಾಗ್ಯ .... .... .... ಶ್ರೀ। "ಭಾರತೀಸುತ"

೪. ಶಾಂತಿ .... .... .... .... .,.. ಶ್ರೀ। "ಗೋಪಬಾಲ"

೫. ನಿಮಂತ್ರಣ ಪತ್ರ .... ...., ಶ್ರೀ। ಯಮ್. ಆರ್. ಘಾಟಿ.




# ಪಶ್ಚಾತ್ತಾಪ

"ಈ ಸಂಸಾರವೇ ಹಾಗೆ; ಅಳು-ನಗುಗಳು ಯಾವಾಗಲೂ ಇದ್ದೇ ಇರುವುದು ಸ್ವಭಾವ! ಹಗಲಿನ ಸೊಬಗನ್ನು ನೋಡಲಿಕ್ಕಾಗಿಯೇ ಇರುಳು ಬರುವುದೆಂದು ನೀನೂ ಓದಿರಬಹುದು..........."

'ಹೌದು; ಪುಸ್ತಕವನ್ನು ಓದುವಾಗ ಆ ನಾಣ್ನುಡಿಯನ್ನು ಹಲವು ವೇಳೆ ಕಂಡಿದ್ದೆ. ಅನುಭವಿಸುವಾಗ ಮಾತ್ರ ಆ ಮಾತಿನ ಅಗಾಧತೆಯನ್ನು ತಿಳಿಯಬೇಕಾಗುವುದು.'

'ಕತ್ತಲೆಯಲ್ಲೂ ಬೆಳಕನ್ನು ಉಪಯೋಗಿಸಿ ತಂತಮ್ಮ ಕರ್ತವ್ಯ ವಿಮೂಢರಾಗದಿರುವುದು, ಬುದ್ಧಿವಂತರ ಲಕ್ಷಣ!'

'ಹಿತೋಪದೇಶವು ಎಲ್ಲರ ಬಾಯಿಂದಲೂ ಹೊರಡುವುದು; ಅದರಂತೆ ಆಚರಿಸುವುದು ದುಃಸಾಧ್ಯವೆಂದು ಅನುಭವದಿಂದಲೇ ತಿಳಿಯಬೇಕಷ್ಟೆ!'

'ಹಂ ಹಾಂ........' ಪುನಃ ಏನು ಹೇಳಬೇಕೆಂದು ತಿಳಿಯಲಿಲ್ಲ.

ತೆಂಗಿನ ತೋಟದ ಅಗಳಿನ ಮೇಲೆ ಇಬ್ಬರು ಕುಳಿತುಕೊಂಡಿದ್ದರು. ಒಬ್ಬನು ಸುಮಾರು ಇಪ್ಪತ್ತೆರಡು ವಯಸ್ಸಿನ ತರುಣನು; ದೇಹವು ಪುಷ್ಟವಾಗಿದೆ. ಕಳೆಗುಂದಿದ ಮುಖದಲ್ಲಿ ಆ ನೈಜಕಾಂತಿಯು ಇನ್ನೂ ಉಳಿದಿದೆ. ಅವನನ್ನು ಕಾಣುವಾಗ ಏನೋ ವ್ಯಸನವು ಅವನನ್ನಾವರಿಸಿದಂತಿದೆ. ಇನ್ನೊಬ್ಬನು ಮುಪ್ಪಿನ ಮೆಟ್ಟಲನ್ನೇರತೊಡಗಿದ್ದನು. ಕುಳ್ಳಗಿನ ದೇಹವು ತೆಳುವಾಗಿದೆ. ಮೈ ಬಣ್ಣವು ಸ್ವಲ್ಪ ಕಪ್ಪು; ಮುಖದ ಮೇಲೆ ಸೌಜನ್ಯದ ಕುರುಹೇ ಕಾಣದು.

'ಅದಿರಲಿ; ನಿನ್ನ ತಂದೆಯು ಅಷ್ಟು ಬೇಗನೆ ಸಾಯುವರೆಂದು ನಾನು ತಿಳಿದಿದ್ದಿಲ್ಲ.' ಎಂದು ಕುಳ್ಳಗಿನ ದೇಹದ ರಾಮರಾಯನು

ಹೇಳಿದನು. ಉತ್ತರವಾಗಿ ತರುಣ ವೆಂಕಟೇಶನು, 'ಹೌದು........' ಎಂದು ಹೇಳಿ, ಬಿಸಿಯುಸಿರು ಬಿಟ್ಟನು.

'ಪಂಡಿತರಿಗೆ ಬಹುಶಃ 'ರುಸುಂ' ನಾಲಲಿಲ್ಲವೋ ಏನೋ? ಇಲ್ಲವಾದರೆ,.... ...'

'ಹಾಗಿರಲೂ ಬಹುದು'. ಮತ್ತೆ ವೆಂಕಟೇಶನು ಮಾತಾಡಲಿಲ್ಲ- ಕಂಬನಿಯು ಹರಿದು ಕೆನ್ನೆಯಲ್ಲಿ ಹೊಳೆಯುತೊಡಗಿತು. ಅಷ್ಟರಲ್ಲಿ ಮನೆಯ ಕಡೆಯಿಂದ 'ವೆಂಕಟೇಶಾ!' ಎಂದು ಆರೋ ಕರೆದರು. ಇಬ್ಬರೂ ಮನೆಗೆ ಹೋದರು.

ಎಲ್ಲೆಲ್ಲೂ ನಿಶ್ಶಬ್ದ. ಕಡಲುಕ್ಕಿ ಶಾಂತವಾದಂತೆ ಶಾಂತತೆಯು ಪಸರಿಸಿತ್ತು. ಪ್ರತಿಯೊಬ್ಬನ ಮುಖದ ಕಾಂತಿಯೂ ಕಳೆಗುಂದಿದೆ. ಕೆಲದಿನಗಳ ಮೊದಲು ಹೊರಲಾರದ ಕೇಶದಾಮವನ್ನು ಹೊತ್ತ ಭಾಗೀರಥಿಯು ಬಿಳಿಯ ವಸ್ತ್ರವನ್ನುಟ್ಟು, ಸಮಾಜದ ಕಟ್ಟಳೆಯಂತೆ ತಲೆ ಬೋಳಿಸಿ, ಇಂದು ಅಭಾಗಿನಿಯಾಗಿರುವಳು. ಅವಳನ್ನು ಕಂಡು ವೆಂಕಟೇಶನ ಮರುಕವು ಉಕ್ಕೇರಿತು. 'ಏಕಮ್ಮ, ಕರೆದೆ?' ಎಂದು ನಡುಗುವ ದನಿಯಿಂದ ಕೇಳಿದನು. ಕಣ್ಣೀರು ಕಾಲುವೆಯಾಗಿ ಹರಿದು, ತನ್ನ ತಾಯಿಯ ಕಾಲುಗಳನ್ನು ತೊಯ್ಯುತ್ತಿತ್ತು. ಭಾಗೀರಥಿಗೂ ದುಃಖವಾಯಿತು. ಚೆನ್ನಾಗಿ ಅತ್ತುಬಿಟ್ಟಳು.

'ಮಿಂದು, ಉಣಬಾರದೇ?' ಎಂದು ಕೇಳಿದಳು. 'ನನಗೆ ಹಸಿವಿಲ್ಲಮ್ಮಾ!' ಎಂದು ಹೇಳಿದಾಗ, 'ಊಟಮಾಡದೆ ಇರಬೇಡ' ವೆಂದು ಹೇಳಿ ಮಗನನ್ನು ಸ್ನಾನಕ್ಕೆ ಕಳುಹಿಸಿದಳು.

'ನೀವೂ ಹೀಗೆ ಅಳಬಹುದೇ?' ಎಂದು ರಾಮರಾಯನು ಕೇಳಿದನು. ಭಾಗೀರಥಿಗೆ ಅವನನ್ನು ಅದೇಕೋ ಕಂಡರಾಗದು. ಆದರೂ ಈಗ ಬಿರುಸಾಗಿ ಮಾತಾಡಲೊಲ್ಲಳು. 'ಎಲ್ಲವೂ ಹಣೆಬರಹ!'ವೆಂದು ಹೇಳಿ, ಅವಳೂ ಒಳಗೆ ಸರಿದಳು. ಹೋಗುವಾಗ 'ನಾಗನಿಗೆ ಕೈ ಮುಗಿದರೆ ತನ್ನ ಹಾಗೇ ಆಗೆಂದು ಹೇಳುವುದಂತೆ!' ಎಂದು ಮನಸ್ಸಿನಲ್ಲೇ

ಹೇಳಿಕೊಂಡಳು. ಈ ಜೋಡನ ಬಲೆಗೆ ತನ್ನ ವ.ಎದ್ದಿನ ಪತಂಗ (ವೆಂಕಟೇಶ)ವು ಬಲಿಬೀಳುವುದೇ? ಎಂದು ಅವಳು ಅಂಜಿದಳು.

* * *

ದಿನಗಳ ಮೇಲೆ ದಿನಗಳುರುಳಿದವು. ತಾಗಿದ ಗಾಯವು ವಾಸಿಯಾಗುತ್ತಾ ಬಂದಿತು. ಒಮ್ಮೊಮ್ಮೆ ಅದನ್ನು ಯೋಚಿಸಿ, ದುಃಖಿಸುತ್ತಿದ್ದರು. ಆದರೂ ವೆಂಕಟೇಶನು ಸಂಸಾರದೊಡನೆ ಬಿಗಿಯಾಗಿ ಬಂಧಿಸಲ್ಪಟ್ಟಿದ್ದನು. ತನ್ನ ಹೆಂಡತಿ ಲಕ್ಷ್ಮಿಯು ಕಟ್ಟಿದ ಕಟ್ಟನ್ನು ಹುಟ್ಟಿದ ಮಗುವು ಗಟ್ಟಿಯಾಗಿ ಬಿಗಿಯಿತು. ಎಷ್ಟೋ ವೇಳೆ ಸುಬ್ಬಣ್ಣ (ಮಗು) ನೊಡನೆ ಆಡುತ್ತಾ ಗಂಡ ಹೆಂಡಿರು ವ್ಯಸನವನ್ನು ಮರೆತು ಬಿಡುತ್ತಿದ್ದರು. ಅಜ್ಜಿಯ ತೊಡೆಯಲ್ಲಿ ನಲಿದಾಡಿ, ಅವಳ ಹಲ್ಲುಗಳನ್ನು ನೋಡಬೇಕೆಂದು ಸುಬ್ಬಣ್ಣನು ಪ್ರಯತ್ನಿಸುವುದು ಒಮ್ಮೊಮ್ಮೆ ಸಫಲವಾಗುತ್ತಿತ್ತು.

ವೆಂಕಟೇಶನೀಗ ಮನೆಯ ಯಜಮಾನ. ತೋಟದಲ್ಲಿ ಬೆಳೆದ ಅಡಿಕೆಯನ್ನು ಮಂಗಳೂರಿಗೆ ಸಾಗಿಸಿ, ನೂರು ರೂಪಾಯಿಯ ನೋಟುಗಳ ಕಟ್ಟನ್ನೇ ಮನೆಗೆ ತರುವ ಅಧಿಕಾರವವನ ಪಾಲಿಗೆ ಬಿದ್ದಿತ್ತು. ತಮ್ಮ ಪೂರ್ವಜರಂತೆ ತಾನೂ ವೈಭವದಿಂದ ಮೆರೆಯಬೇಕೆಂದು ಹಲವು ವೇಳೆ ಭಾವಿಸಿದನು. ತಾಯಿಯ ಮೇಲಿನ ಭಕ್ತಿಯಿಂದಲೋ, ಹೆದರಿಕೆಯಿಂದಲೋ, ಇನ್ನಾವುದರಿಂದಲೋ, ಆ ಕೆಲಸಕ್ಕಾರಂಭಿಸಲಿಲ್ಲ. ಆ ಅಭಿಲಾಷೆಯು ಒಳಗೊಳಗೇ ಕೊರೆಯುತ್ತಿತ್ತು.

ಮಾರ್ಚ ತಿಂಗಳು ಕಳೆದಿತ್ತು. ಅಷ್ಟರ ವರೆಗೂ ಅಡಿಕೆಯನ್ನು ಮಾರಿಲ್ಲ. ಆದರೆ, ಎಷ್ಟು ಕಾಲ ಇಡುವುದೆಂದು ಆಗ ಮಂಗಳೂರಿಗೆ ಕೊಂಡುಹೋದನು. ಇದೇ ಸಮಯದಲ್ಲಿ ರಾಮರಾಯನೂ ಮಂಗಳೂರಿಗೆ ಬಂದಿದ್ದನು. ಇಬ್ಬರೂ ಒಟ್ಟಿಗೆ ತಿರುಗಾಡಲಾರಂಭಿಸಿದರು. ರಾಮರಾಯನ ಸ್ನೇಹಿತರು ಇವನಿಗೂ ಮಿತ್ರರಾದರು

ಹಂಪನಕಟ್ಟೆಯ ಪದಪಥ (Foot-path)ದಲ್ಲಿ ರಾಮರಾಯನೂ

ವೆಂಕಟೇಶನೂ ನಡೆದುಹೋಗುತ್ತಿದ್ದರು. ಊರ ಸಮಾಚಾರಗಳನ್ನು ಮಾತಾಡುತ್ತಿದ್ದರು. ರಾಮರಾಯನ ಉದ್ದೇಶವು ಬೇರೆಯಾಗಿತ್ತು.

ಕೃಷ್ಣಭವನದಲ್ಲಿ ಕಾಫಿ ಕುಡಿದುದರ ಬಿಲ್ಲು ಒಂದು ರೂಪಾಯಿ ಹನ್ನೊಂದಾಣೆಗಳು. ರಾಮರಾಯನು ನಾನು ಹಣಕೊಡುವೆನೆಂದು ಕಿಸೆಗೆ ಕೈಹಾಕಿದನು. ವೆಂಕಟೇಶ ಬಿಡಲಿಲ್ಲ; ತಾನೇ ಕೊಟ್ಟನು.

ಸಂಜೆಯಾಯಿತು; ಕತ್ತಲಾಗಲಿಲ್ಲ. ರಥಬೀದಿಯಿಂದ ಕಂಬಳಕ್ಕೆ ಹೋಗುವ ದಾರಿಯಲ್ಲಿ ಇಬ್ಬರೂ ನಡೆಯುತ್ತಿದ್ದರು ಮಾರ್ಗದ ಬಲ ಪಾರ್ಶ್ವದಲ್ಲಿ ಒಂದು ಕಡೆ ಒಬ್ಬಳು ನಿಂತುಕೊಂಡಿದ್ದಳು; ಚಂಚಲಾಕ್ಷಿಯೆಂದು ತೋರಿಸಿಕೊಳ್ಳುತ್ತಿದ್ದಳು. ಇವರಿಬ್ಬರನ್ನು ಕಂಡು ಆ ಕಡೆಗೊಮ್ಮೆ ಕಣ್ಣು ತಿರುಗಿಸಿ, ಮುಗುಳು ನಕ್ಕಳು. 'ವೆಂಕಟೇಶಾ', ನೋಡು, ನಿನ್ನನ್ನು ನೋಡಿ ನಗುತ್ತಾಳೆ; ಕರೆಯುವುದದು!' ಎಂದು ರಾಮರಾಯನ ಪೀಠಿಕೆಗಾರಂಭವಾಯಿತು.

'ಹಾಗಾದರೆ, ಅವಳೇನು ಸೂಳೆಯೋ?'

'ಇನ್ನೂ ತಿಳಿಯದೇ?....ಐದು ರೂಪಾಯಿ ಕೊಟ್ಟರೆ ಸರಿ........'

'ಅದಕ್ಕೆ ಯಾರಾದರೂ 'ಕಾಯಮಿನ ಜನ'ವಿದ್ದೀತು'.

'ಅದರ ಮಗಳೊಂದಿದೆ; ಇದಕ್ಕಿಂತ ಹತ್ತುಪಾಲು, ಅದರ ರೂಪು.'

ವೆಂಕಟೇಶನ ತಲೆತಿರುಗಿತು. 'ಒಮ್ಮೆ ಹೋಗಿ ನೋಡಿ ಬರೋಣವೇ? ಎಂದರೆ, ನೋಡುವುದು ಮಾತ್ರ; ಕಾಸೂ ಬಿಚ್ಚಲಿಕ್ಕಿಲ್ಲ.......'

'ಛೆ! ಅದು ಹೇಗೆ ಸಾಧ್ಯ? ಒಮ್ಮೆ ಹೋಗಿ ಬರುವುದು ನಿನ್ನಂತಹನಿಗೇನು ಕಷ್ಟ!'

'ಅವಳು ಎಷ್ಟೆಲ್ಲಾ ಔಷಧಗಳನ್ನು ಪಾನಮಾಡಿದ್ದಾಳೋ ಏನೋ?'

'ಅದೊಂದು ಖಂಡಿತವಾಗಿಯೂ ಇಲ್ಲ; ನೀನು ಅದಕ್ಕಾಗಿ ಹೆದರುವುದೇ ಬೇಡ.'

ಇನ್ನೂ ಎಷ್ಟೋ ಮಾತುಕತೆಗಳಾದುವು. ರಾತ್ರಿ ಹೋಟೆಲಿಗೆ ಹೋಗಿ ಊಟತೀರಿಸಿದರು. ಮಲಗುವ ಸಿದ್ಧತೆಯನ್ನು ಮಾಡಿದರು. ಒಂದು ಸೊಳ್ಳೆಯೊಮ್ಮೆ ಬಂದು, ಗುಟ್ಟಾಗಿ ಕಿವಿಯಲ್ಲಿ ಏನನ್ನೋ ಊದಿ ಹೋಯಿತು. 'ಈ ದಿನ ಇಲ್ಲಿ ನಿದ್ದೆ ಬರಲಿಕ್ಕಿಲ್ಲ; ಈ ಸೊಳ್ಳೆಗಳ ಕಾಟ!' ಎಂದು ರಾಮರಾಯನು ಹೇಳಿದನು. 'ಹಾಗಾದರೆ, ಅಲ್ಲಿಗೆ ಹೋಗೋಣವೇ?' 'ಓಹೊ!'

* * *

ಈಗ ವೆಂಕಟೇಶನಿರುವುದು ಮಂಗಳೂರಲ್ಲೇ. ತಾಯಿಯು ಬೈದು ದಾಯಿತು; ಹೆಂಡತಿಯು ಕಂಬನಿಮಿಡಿದು ಪಾದಕ್ಕೆರಗಿದುದಾಯಿತು. ಎಲ್ಲವೂ ನೀರನ್ನು ಕತ್ತಿಯಿಂದಿರಿದಂತೆಯೇ ಸರಿ! ಇದ್ದ ಹಣವೆಲ್ಲಾ ಸೂಳೆಯ 'ಭಂಡಾರ'ಕ್ಕೆ ಹೋಗಿ ತುಂಬುತ್ತಿತ್ತು. ಪಟ್ಟಣದಲ್ಲಿ ತಿರುಗಾಡುವಾಗ ಹಿಂದು ಮುಂದು ಅನೇಕ ಜನರಿರುತ್ತಿದ್ದರು. ಯಾವ ಕೆಲಸವನ್ನೂ ಮಾಡಿಸಬಹುದಿತ್ತು.

ಮನೆಯ ಯಜಮಾನಿಕೆಯನ್ನು ಬಿಟ್ಟುಕೊಟ್ಟಿಲ್ಲ. ಅಡಿಕೆ ಸಾಗಿಸಿ ಹಣ ತೆಗೆದುಕೊಂಡು ಬರುವುದು ವೆಂಕಟೇಶನೇ! ದೊರೆತ ಹಣದಲ್ಲಿ ಅರ್ಧಾಂಶವಾದರೂ ತನ್ನ ಚೆನ್ನೆಯ ಕೈಗೆ ಹೋಗದಿರುತ್ತಿದ್ದಿಲ್ಲ. ತಾಯಿಯು ಎಷ್ಟೋ ಸಾರಿ 'ಹಾಗೆಲ್ಲಾ ಮಾಡಬಾರದೆ'ಂದು ಬುದ್ಧಿ ಹೇಳಿದಳು. ಆದರೂ ಕೇಳಲಿಲ್ಲ.

ಭಾಗೀರಥಿಯು ಇದನ್ನು ನಿಲ್ಲಿಸುವ ಉಪಾಯವನ್ನು ಯೋಚಿಸಿದಳು; ಬಗೆಹರಿಯಲಿಲ್ಲ. ಮನೆಯ ಆಳ್ವಿಕೆಯನ್ನು ತಾನೇ ವಹಿಸಿಕೊಂಡಳು. ಮಮತೆಯ ಮಗನಾದುದರಿಂದ ವೆಂಕಟೇಶನು ಹತ್ತು ಕೇಳಿದರೆ ಐದಾದರೂ ಕೊಡದಿರಲು ಅವಳಿಂದ ಸಾಧ್ಯವಾಗಲಿಲ್ಲ. ಇದರಿಂದಲೂ ಅವನು ದಾರಿಗೆ ಬರಲಿಲ್ಲ. ಕೇಳುವಾಗ ಕೊನೆಯ ಪಕ್ಷ ಐವತ್ತನ್ನಾದರೂ ಕೇಳಿ, ಇಪ್ಪತ್ತನ್ನಾದರೂ ಹೊಡೆದುಕೊಂಡು ಹೋಗುತ್ತಿದ್ದನು.

ಎರಡು ಮೂರು ವರ್ಷಗಳು ಇದೇ ರೀತಿ ಕಳೆದುಹೋದುವು. ಆಗ ಮಾತ್ರ ವೆಂಕಟೇಶನು ಔಷಧಿ ತೆಗೆದುಕೊಳ್ಳಬೇಕಾಯಿತು.

ರೋಗವು ಬೇಗನೆ ವಾಸಿಯಾಗದೆ, ಎಷ್ಟೋ ಹಣವು ಮುಗಿಯಿತು. ಹೇಗಾದರೂ ಒಮ್ಮೆ ಗುಣವಾದಂತಾಯಿತು.

'ಕೆಟ್ಟ ಮೇಲೆ ಬುದ್ಧಿ ಬರುವುದೆ'ಂದು ನಾಡಿನ ಹೇಳಿಕೆ. ಅದು ಇಲ್ಲಿಗೆ ಸರಿಬೀಳಲಿಲ್ಲ. ರೋಗವು ಗುಣವಾದ ಮೇಲೆ ಪುನಃ ಸೂಳೆಯ ಸಹವಾಸದಲ್ಲೇ ಕಾಲಕ್ಷೇಪ! ಎಷ್ಟೋ ಜನರು ಬುದ್ಧಿಹೇಳಿದರು. ರಾಮರಾಯನೂ ಇದು ಕೆಟ್ಟದೆಂದನು. ಸೂಜಿಕಲ್ಲಿಗೂ ಕಬ್ಬಿಣಕ್ಕೂ ಇರುವ ಸಂಬಂಧವನ್ನು ಬಿಡಿಸುವುದು ಹೇಗೆ?

ಮನೆಯಲ್ಲಿ ಖಜಾನೆಯು ಖಾಲಿಯಾಗತೊಡಗಿತು. ಆದರೂ ವೆಂಕಟೇಶನು ಬದಲಾಗಲಿಲ್ಲ. ಕಂಡಕಂಡವರಿಂದ ಸಾಲತೆಗೆದನು. ಮಿತ್ರರ ಕೈಯಿಂದ ತೆಗೆದುಕೊಂಡ ಹಣಕ್ಕೆ ಒಂದು ದೊಡ್ಡ ನಾಮ! ಇತರರದನ್ನು ಪುನಃ ಕೊಡುವ ಆಲೋಚನೆಯಲ್ಲೇ ಇಲ್ಲ. ಯಾರಾದರೂ ಆ ಪ್ರಸ್ತಾಪವನ್ನೆತ್ತಿದರೆ, 'ಏನು ನಿನ್ನ ಹಣ ತಿನ್ನೇನೋ?' ಎಂದು ಪ್ರಶ್ನೆಹಾಕಿ ಅವರ ಬಾಯಿ ಮುಚ್ಚಿಸಿಬಿಡುವನು.

ವೆಂಕಟೇಶನಿಗೆ ಸಾಲವು ಏರುತ್ತಾ ಬಂದಿತು. ಸ್ನೇಹಿತರ ಸಂಖ್ಯೆಯೂ ಕಿಳಗಿಳಿಯಿತು. ತನ್ನ ಚೆನ್ನೆಗೆ ತನ್ನಲ್ಲಿ ಪ್ರೇಮವು ಕಡಿಮೆಯಾಗಿದೆಯೆಂದು ಅವನಿಗೆ ತಿಳಿಯಲೇ ಇಲ್ಲ. ಅವಳಿಗಾಗಿ ಇನ್ನೂ ಸಾಲಪಡೆಯಲು ಸಿದ್ಧನಿದ್ದನು; ಕೊಡುವವರು ಮಾತ್ರ ಇರಲಿಲ್ಲ. ಒಂದು ಉಂಗುರವಾಗಬೇಕೆಂದು ಅವಳ ಬಾಯಿಂದ ಹೊರಬೀಳುವುದರೊಳಗೆ ಈಗಲೂ ಒಂದಿಲ್ಲೊಂದು ರೀತಿಯಿಂದ ಅವಳ ಬೆರಳಲ್ಲಿ ಉಂಗುರವಿರುತ್ತಿತ್ತು. ಹಣಕ್ಕಾಗಿ ಈಗ ಅವನು ಬಹಳ ಕಷ್ಟ ಪಡಬೇಕಾಯಿತು. ಒಂದೊಂದು ಬಾರಿ ಅಮ್ಮನಿದ್ದಲ್ಲಿ ಬಂದು ಕಂದಿದ ಮುಖದಿಂದ ಹಣಕೇಳುತ್ತಿದ್ದನು. 'ಹೆತ್ತ ತಾಯ ಹೆತ್ತ ಕರುಳ, ಮಮತೆ ಮಾಸದು!' ಎಂಬಂತೆ, ಎಲ್ಲಿಂದಾದರೂ ಮಾಡಿ, ಭಾಗೀರಥಿಯು ಕೊಡುತ್ತಿದ್ದಳು. ಅದೂ ಸಾಧ್ಯವಿಲ್ಲದಿದ್ದರೆ ತನ್ನ ಹೆಂಡತಿಯ ಚಿನ್ನಾಭರಣಗಳನ್ನು ಅಡವಿಟ್ಟು, ಹಣಮಾಡುತ್ತಿದ್ದನು. ಧನಸಂಗ್ರಹಕ್ಕಾಗಿ ಅವನು

ಬಂದ ಬನ್ನವಷ್ಟಿಷ್ಟಲ್ಲ. ಒಮ್ಮೊಮ್ಮೆ ಕೃತಕಾರ್ಯನಾಗದಿದ್ದುದೂ ಇದೆ.

ಒಬ್ಬೊಬ್ಬನಾಗಿ ಕೊಟ್ಟ ಸಾಲಕ್ಕೆ ಕೈಸೇತು ದಾಖಲು ಮಾಡ ತೊಡಗಿದರು. ಬರಹವಮೂಲಕ ಹಣಕೊಡದವರು ಯಾವಾಗಲೂ ಅವನ ಬಳಿಗೆ ಬಂದು, ಇದ್ದ ಒಂದೆರಡು ರೂಪಾಯಿಗಳನ್ನು ಕೊಂಡು ಹೋದರು. ಇಷ್ಟರಿಂದಲೂ ಅವನ ಮನಸ್ಸು ಅಲುಗಾಡಲಿಲ್ಲ. ಸಾಲ ಗಾರರಿಗೆ ಹಣವನ್ನು ಕೊಡಲೂ ಇಲ್ಲ. ಆದುದರಿಂದ ಅವನಿಗೆ ತಿಂಗ ಳಿಗೆ ನಾಲ್ಕಾರು ಸಲವಾದರೂ ಕೋರ್ಟಿನ ಮೆಟ್ಟಲನ್ನೇರಬೇಕಾಗಿ ಬಂದಿತು. ಪ್ರತಿಯೊಂದು ಖಟ್ಲೆಗಳಲ್ಲೂ ವೆಂಕಟೇಶನು ಸಾಲವನ್ನು ಬಡ್ಡಿಸಹಿತ ತೀರಿಸಬೇಕೆಂದು ಅವನ ಮೇಲೆ ಡಿಕ್ರಿಯಾಯಿತು. ಇಷ್ಟಾ ದರೂ ಋಣಮುಕ್ತನಾಗುವ ಯೋಚನೆಯೇ ಬರಲಿಲ್ಲ.

ಒಂದು ಅಮಲ್ದಾರಿಯಲ್ಲಿ ವೆಂಕಟೇಶನು ಒಂದು ಸಾವಿರಕ್ಕಿಂ ತಲೂ ಹೆಚ್ಚು ಕೊಡಬೇಕಾಗಿತ್ತು. ವಾದಿಯು ವಾರಂಟು ತೆಗೆಯಿಸಿ ದನು. ಇನ್ನು ತಾನು ವಿಮುಖನಾಗನು. ಇನ್ನೊಂದು ನಂಬ್ರದ ಸಲುವಾಗಿ ಒಂದು ದಿನ ಕೋರ್ಟಿಗೆ ಹೋಗಿದ್ದನು. ಪೇದೆಯೊಬ್ಬನು ಬಂದು, 'ತಮಗೆ ವಾರಂಟಿದೆ, ಸ್ವಾಮಿ!' ಎಂದನು. 'ಈ ದಿನ ನೀನು ನನ್ನನ್ನು ಹಿಡಿಯುವುದು ಹೇಗೆ? ನನಗೆ ಈ ದಿನ ನಂಬ್ರವಿದೆ!' ಎಂದು ವೆಂಕಟೇಶನು ಮರುನುಡಿ ನುಡಿದನು. ಪೇದೆಗೆ ವಾದಿಯ ಕಡೆಯಿಂದ ತಿಂದ ಲಂಚದ ಕೆಲಸವಾಗಬೇಕಾಗಿತ್ತು. 'ಯಾಕೆ, ಸ್ವಾಮಿ, ಹಾಗೆ ಹೇಳುವದು? ನೀವು ಜೈಲಿಗೆ ಹೋಗುವ ಹೆದರಿಕೆಯೇ ಇಲ್ಲ.........'

'ನಿನ್ನ ಉಪಾಯವೆಲ್ಲ ನನಗೆ ಗೊತ್ತಿದೆ. ಇಗೋ, ಬೇಕಾದರೆ, ಒಂದು ರೂಪಾಯಿ ತೆಗೆದುಕೊ'.

'ನಿಮ್ಮಾಣೆ! ಅವರು (ವಾದಿ) ಹೇಗೂ ಜೈಲಿಗೆ ಕಳುಹಿಸಲಿಕ್ಕಿಲ್ಲ. ಒಂದು ವೇಳೆ ಕಳುಹುವುದಾದರೂ ಬತ್ತೆಕಟ್ಟಲಿಕ್ಕೆ ಅವರಲ್ಲೀಗ ಒಂದೇ ಒಂದು ಕಾಸಿಲ್ಲ. ಮತ್ತೆ ನಿಮ್ಮನ್ನು ಕಾರಾಗೃಹಕ್ಕೆ ಕಳಹಿಸುವುದಾ ದರೂ ಹೇಗೆ?"

ವೆಂಕಟೇಶನಿಗೆ ನಿಜವಿರಬಹುದೆಂದಾಯಿತು; 'ಆಗಲಿ, ಹೋಗೋಣ....' ಎಂದು ಇಬ್ಬರೂ ಹೋದರು. ಪ್ರತಿವಾದಿ ವೆಂಕಟೇಶನಿಗೆ ಮೂರು ತಿಂಗಳ ಸಜೆಗೂ ಹುಕುಮಾಯಿತು. ವಾದಿಯು ಹಣ ತೆರಲಾರನೆಂದಿದ್ದನು. ನಿಜವಾಗಿ, ಅವನಲ್ಲಿ ಬೇಕಾದಷ್ಟು ರೂಪಾಯಿಗಳೂ ಇರಲಿಲ್ಲ. ಆದರೂ, ಇವನನ್ನು ಜೈಲಿಗೆ ಕಳುಹಿಸಬೇಕೆಂದು ತನ್ನ ಮಿತ್ರರೊಬ್ಬರಿಂದ ತೆಗೆದು ಹಣಕಟ್ಟಿಬಿಟ್ಟನು! ವೆಂಕಟೇಶನು ಸೆರೆಮನೆಯನ್ನು ಸೇರಬೇಕಾಯಿತು.

ಈ ಸುದ್ದಿಯು ಊರಲ್ಲೆಲ್ಲಾ ಹಬ್ಬಿತು. 'ಕುಡ್ತಲೆಯು ಇವನ ಹೆಸರಲ್ಲಿದ್ದರೆ, ಅಡವಾದರೂ ಮಾಡಿ ಸಾಲತೀರಿಸಬಹುದಿತ್ತು' ಎಂದು ಕೆಲವರು ಹೇಳತೊಡಗಿದರು. ಸಾಲಕೊಟ್ಟವರು ತಮ್ಮ ಹಣಕ್ಕೆ ಗೋಪಿನಾಮವೆಂದು ಬೇಸರಗೊಂಡರು. ಅವನು ಜೈಲಿಗೆ ಹೋದುದರಿಂದ ಸ್ವಲ್ಪ ಸಮಾಧಾನವೂ ಆಯಿತು.

ಈ ವರ್ತಮಾನವನ್ನು ಕೇಳಿ ಭಾಗೀರಥಿಯು ಅಳತೊಡಗಿದಳು. ಲಕ್ಷ್ಮಿಯೂ ಹಗಲಿರುಳು ಕಂಬನಿಗರೆಯುತ್ತಿದ್ದಳು. ಏನು ಮಾಡಬೇಕೆಂದು ಅವರಿಬ್ಬರಿಗೂ ತಿಳಿಯಲಿಲ್ಲ. ಇದೇ ಸಮಯಕ್ಕೆ ಗೋವಿಂದ ಭಟ್ಟರೂ (ಲಕ್ಷ್ಮಿಯ ತಂದೆ) ಬಂದರು. ತನ್ನ ಅಳಿಯನ ದುರವಸ್ಥೆಯನ್ನು ಕಂಡು ಅವರೂ ಚಿಂತೆಗೊಳಗಾದರು. 'ಎಲ್ಲಾ ಸಾಲವನ್ನೂ ನಾನೇ ತೀರಿಸುವೆನು. ಆದರೆ........'

'ಆದರೇನು? ಏನು ಬೇಕಾದರೂ ಮಾಡುವೆವು. ಒಮ್ಮೆ ಆ ಕಾರ್ಯ ಮಾಡಿರಿ!' ಎಂದು ಅತ್ತೆ ಸೊಸೆಯರಿಬ್ಬರೂ ಹೇಳಿಕೊಂಡರು.

'ಮತ್ತೇನೂ ಇಲ್ಲ; ಆಸ್ತಿಯ ಸ್ವಲ್ಪಾಂಶವನ್ನು ಲಕ್ಷ್ಮಿಯ ಹೆಸರಿಗೆ ಮಾಡಿಟ್ಟು ಆ ಮೇಲೆ ಅವನು ಮಾಡಿದ ಎಲ್ಲಾ ಸಾಲವನ್ನೂ ತೀರಿಸಬಹುದು.'

ಹೇಗಾದರೂ ಮಾಡಿ ತನ್ನ ಮಗನನ್ನುಳಿಸಬೇಕೆಂದು ಭಾಗೀರಥಿಯು ಅದಕ್ಕೂ ಒಪ್ಪಿದಳು. ಗೋವಿಂದ ಭಟ್ಟರು ಸಾಲವನ್ನು

ತೀರಿಸಿದರು. ತನ್ನ ಮಗಳ ಹೆಸರಿಗೆ ಇಡೀ ಆಸ್ತಿಯ ಅರ್ಧಾಂಶವನ್ನು ಬರೆಸಿದರು. ಹಣಕ್ಕಾಗಿ ವೆಂಕಟೇಶನು ತನ್ನ ಮಗಳನ್ನು ಕಾಡಬಹುದಲ್ಲ ಎಂದು ಯೋಚನೆಗೊಳಗಾದರು. ಸಾಧ್ಯವಾದರೆ ಅವನನ್ನು ಸೂಳೆಯ ಸಹವಾಸದಿಂದ ಬಿಡಿಸಬೇಕೆಂದು ಬಗೆದರು.

ವೆಂಕಟೇಶನು ಸೆರೆಮನೆಯಿಂದ ಹೊರಬಂದನು. ತನ್ನ ಮಾವನೇ ಹಣಕೊಟ್ಟದೆಂದು ಅವನಿಗೆ ತಿಳಿಯಿತು. ಇನ್ನೇನು? ಯಾರ ಹಂಗೂ ಇಲ್ಲದೆ ತನ್ನ ಹೆಂಡತಿಯಿಂದ ಆಸ್ತಿಯನ್ನು ಒಳಹಾಕಿ ಸ್ವೇಚ್ಛಾಚಾರಿಯಾಗಿರಬಹುದೆಂದೂ ಭಾವಿಸಿದನು. ಊರಿಗೆ ಹೋಗುವ ಮೊದಲೊಮ್ಮೆ ತನ್ನ ಚೆನ್ನೆಯನ್ನೂ ನೋಡಬೇಕೆಂದಾಯಿತು. ಹೋದನು.

ಅವಳ ಮನೆಯ ಕದ ಮುಚ್ಚಿತ್ತು. ಬಾಗಿಲು ತಟ್ಟಿದಾಗ 'ಯಾರದು?' ಎಂದು ಗಂಭೀರವಾದ ಪ್ರಶ್ನೆಯೊಂದು ಒಳಗಿನಿಂದ ಕೇಳಿಸಿತು. 'ನಾನು, ವೆಂಕಟೇಶ!' ಎಂದನು. 'ಯಾವ ವೆಂಕಟೇಶ?' 'ಏನು ಮರೆತುಹೋಯಿತೇ? ಹಳ್ಳಿಗಾಡಿನ ವೆಂಕಟೇಶ.' ಈಗ ಸ್ತ್ರೀ ಕಂಠವು ಕೇಳಲಿಲ್ಲ. ಗಂಡುಸಾರೋ ಮಾತಾಡಿದನು. 'ಹೋಗುವೆಯೋ? ಅಲ್ಲ, ಓಡಿಸಬೇಕೋ?'

ತನ್ನ ಚೆನ್ನೆಗೆ ಇನ್ನೊಬ್ಬ ಚೆನ್ನನು ದೊರೆತನೆಂದು ಅವನಿಗೆ ತಿಳಿಯಿತು. ತನ್ನ ಸಂಪತ್ತನ್ನು ಅಪಹರಿಸಿ, ನೆತ್ತರಿಲ್ಲದ ಹಸುವಿನಂತೆ ಮಾಡಿದ ಸೂಳೆಯ ಕೃತ್ರಿಮ ಪ್ರೇಮದಲ್ಲಿ ಹುಳುಕನ್ನು ಕಂಡು ಹಿಡಿದನು. ಆದರೂ ತನ್ನನ್ನು ಅವಳು ಮರೆಯಲಾರಳೆಂದು ಬಗೆದಿದ್ದನು. ಅದು ಮಾತ್ರ ಗಾಳಿಗೋಪುರವೆಂದು ಆಗ ಅವನಿಗರಿಯಲಿಲ್ಲ. ಇನ್ನೊಮ್ಮೆ ಬಂದು ನೋಡಬೇಕೆಂದು ಅಂದಿನಿರುಳು ಇನ್ನೊಂದೆಡೆಗೆ (?) ಹೋದನು.

ಎಷ್ಟು ಬಾರಿ ಬಂದರೂ ಗಂಟೆಗೊಂದೇ ಸ್ವರ! ಇಂತಹ ನೀಚತನವನ್ನು ಕಂಡು ಸಿಟ್ಟುಗೊಳ್ಳುವನು; ಏನು ಮಾಡಲೂ ಸಾಧ್ಯವಿಲ್ಲ. ಒಳಗೊಳಗೇ ಮನಸ್ಸು ಬೇಯತೊಡಗಿತು. ತಾನು ಸಂಸಾರಿಯಾಗಿ

ಮನೆಯಲ್ಲೇ ಇದ್ದರೆ ಸೊಬಗಿನ ಸುಗ್ಗಿಯನ್ನು ಕಾಣಬಹುದಿತ್ತೆಂದು ಅವನಿಗನಿಸಿತು.

* * *

ಸಂಜೆಯಾಗುತ್ತಾ ಬಂದಿತು. ಮನೆಯಂಗಳದಲ್ಲಿ ಸುಬ್ಬಣ್ಣನು ಆಡುತ್ತಿದ್ದನು. ಹೊರ ಜಗಲಿಯಲ್ಲಿ ಭಾಗೀರಥಿಯು ಕುಳಿತುಕೊಂಡಿದ್ದಳು. ಲಕ್ಷ್ಮಿಯು ಒಳಗೆ ಅಡುಗೆಯ ಕೆಲಸದಲ್ಲಿದ್ದಳು. ಆಗ ವ್ಯಕ್ತಿಯೊಂದು ಅಂಗಳವನ್ನೇರಿತು. ಉಟ್ಟ ಮುಂಡು ವಸ್ತ್ರವು ಕೊಳೆಯಾಗಿದೆ; ಒಂದೆಡೆ ಸ್ವಲ್ಪ ಹರಿದೂ ಹೋಗಿರುವುದು. ತೊಟ್ಟ ಅಂಗಿಯಲ್ಲಿ ತುಂಬಾ ಧೂಳು ಕೆಂಪಾಗಿ ಕಾಣುವುದು. ಮುಖವು ಮಲಿನವಾಗಿತ್ತು. ತಲೆ ಕೂದಲು ಮೋರೆಯ ಮೇಲೆ ಬಿದ್ದುಕೊಂಡಿತ್ತು. ಮೊದಲು ಇದಾರೆಂದು ಸುಬ್ಬಣ್ಣನಿಗಾಗಲೀ, ಭಾಗೀರಥಿಗಾಗಲೀ, ತಿಳಿಯಲಿಲ್ಲ. 'ಏನು ಸುಬ್ಬಣ್ಣ?' ಎಂಬ ಪ್ರಶ್ನೆಯಿಂದ ಬಂದುದು ವೆಂಕಟೇಶನೆಂದರಿತರು. ಅವನ ಮಾತಿನಲ್ಲಿ ಸೌಜನ್ಯವು ಒಡಮೂಡಿತ್ತು; ಪ್ರೇಮವು ಹರಿಯುತ್ತಿತ್ತು.

'ಲಕ್ಷ್ಮೀ, ನಿನ್ನ ಗಂಡ ಬಂದ, ನೋಡು!' ಎಂದು ಭಾಗೀರಥಿಯು ಸೊಸೆಯನ್ನು ಕರೆದಳು. ಲಕ್ಷ್ಮಿಯು ಬರುವಾಗ ಒಂದು ತಂಬಿಗೆ ನೀರನ್ನು ತಂದು ತನ್ನ ಗಂಡನ ಮುಂದಿಟ್ಟಳು. 'ಬಾಯಾರಿಕೆಗೆ ಬೇಕೆ?' ಎಂದು ಮೃದುವಾಗಿ ಕೇಳಿದಳು. 'ಬೇಡ' ಎಂಬ ಉತ್ತರವೂ ಬಂದಿತು. ತನ್ನ ಪತ್ನಿಯ ನಡೆನುಡಿಗಳಿಂದ ಅವನ ಮನಸ್ಸು ಸಂಪೂರ್ಣ ಬದಲಾಯಿತು. ಇಂತಹ ಪ್ರೇಮದ ಬಿತ್ತನ್ನು ಮರಳುಗಾಡಿನಲ್ಲಿ—ನೀರಿಲ್ಲದಲ್ಲಿ—ಬಿತ್ತಿದೆನೆಂದು ತನ್ನಲ್ಲೇ ಹೇಳಿಕೊಂಡನು.

ಇರುಳು ಶಯ್ಯಾಗಾರದಲ್ಲಿ ಒಬ್ಬನೇ ಕುಳಿತಿದ್ದನು. ಲಕ್ಷ್ಮಿಯು ಸುಬ್ಬಣ್ಣನನ್ನೆತ್ತಿಕೊಂಡು, ಮೆಲ್ಲನೆ ಪ್ರವೇಶಿಸಿದಳು. ಮಗುವನ್ನು ಹಾಸಿಗೆಯಲ್ಲಿ ಮಲಗಿಸಿ, ತನ್ನ ಗಂಡನ ಬಳಿ ಬಂದು ನಿಂದಳು. ಹೇಗೆ ಮಾತಾಡಲೆಂದು ಇಬ್ಬರಿಗೂ ತಿಳಿಯಲಿಲ್ಲ. ಕ್ಷಣಕಾಲ ಕಳೆದ ಬಳಿಕ 'ಲಕ್ಷ್ಮೀ...........' ಎಂದನು. 'ಹೂಂ!'

'ನಾನು ಕೆಟ್ಟುಹೋಗಿದ್ದೇನಲ್ಲವೇ?'

'ನನ್ನ ಪಾಲಿಗೆ ಕೆಡಲಿಲ್ಲ!'

'ನಿನ್ನನ್ನು ಇಲ್ಲಿಯೇ ಬಿಟ್ಟುಹೋದರೆ............?'

'............ಮಗನಿಗಾಗಿ............'

'ಇಲ್ಲ, ಲಕ್ಷ್ಮೀ, ಅಳಬೇಡ; ನಿನ್ನನ್ನಿನ್ನು ಬಿಡ-ವಂತಿಲ್ಲ. ನಮ್ಮ ಪ್ರೇಮದ ಬಿತ್ತಿಗಾಗಿ—ಈ ಸುಬ್ಬಣ್ಣನಿಗಾಗಿ— ನಾನು ನಿನ್ನನ್ನು ದೂರಮಾಡಲೊಲ್ಲೆನು. ನಮ್ಮೀರ್ವರ ಬಂಧನವನ್ನು ಈ ಮಗುವೇ ಬಿಗಿಯುವುದು............'

'ಅಹಹ! ಸುಬ್ಬಣ್ಣ!........'

ಗಂಡ ಹೆಂಡಿರಿಬ್ಬರೂ ಸುಬ್ಬಣ್ಣನ ಎಡಬಲ ಗಲ್ಲಗಳಿಗೆ ಮುತ್ತಿಟ್ಟರು. ಮಗುವು ಎಚ್ಚರಗೊಂಡು ಮುಗುಳು ನಕ್ಕಿತು.



# ಮುರಿದ ಮುರಲಿ

—೧—

ಆ ಕೋಕಿಲ ಕಂಠದಿಂದೊಸರಿ ಬಂದ ಸುಣ್ದನಿಯ ರಾಗ ತರಂಗಗಳು
ಎಲ್ಲೆಲ್ಲೂ ಹರಡಿ ಪ್ರತಿಧ್ವನಿಸಿದುವು. ಸಭಾಗೃಹದಲ್ಲಿ ಸಕಲ ಜನ
ಸಮುದಾಯದ ದೇಹಗಳು ಪುಲಕಿತವಾಗಲಾರಂಭಿಸಿದ್ದುವು. ಬಡವ
ಬಲ್ಲಿದನೆಂಬ ಭೇದವಿಲ್ಲದೆ, ಎಲ್ಲರ ಶಿರಗಳು ಪರವಶತೆಯಿಂದ ತೂಗ
ಲಾರಂಭಿಸಿದ್ದವು. ಅವರ ಮನವೇನೋ ಅನಿರ್ವಚನೀಯ ಆನಂದ
ದಲ್ಲಿ ತೇಲುತ್ತಿರುವಂತೆ ಭಾಸವಾಗುತಿತ್ತು. ಹತ್ತಿರವಿದ್ದ ಸುಮೇರು
ರಾಯರು ಕೂಡ ತಮ್ಮ ವಿಸ್ತಾರ ರುಮಾಲಿನಿಂದಾವೃತವಾದ ತಲೆ
ಯನ್ನು ವಾತಾವರಣದಲ್ಲಿ ತೂಗಲಾಡಿಸಿ, 'ಹಾ, ಭೂಪಾಲರಾಯರೇ;
ಹೇಗಿದೆ ಯಮನ್ ಕಲ್ಯಾಣಿ?' ಎಂದು ಪ್ರಶ್ನಿಸಿದರು.

ನಾದಾನಂದೋದ್ಯಾನದಲ್ಲಿ ವಿಹರಿಸುತಿದ್ದ ಭೂಪಾಲರಾಯರು
ಸುಮೇರುರಾಯರ ಪ್ರಶ್ನೆಗೆ ತಲೆದೂಗಿನ ಉತ್ತರವೀಯುತ್ತ, 'ಭೇಷ್....
ಬಲು ಭೇಷ್!' ಎಂದೊದರಿದರು.

ಅಷ್ಟರಲ್ಲಿ 'ಆಧುನಿಕ ತಾನಸೇನ್'ರು 'ಛೆ! ನಿಮ್ಮ ಮಾತುಗ
ಳಿಂದ ನನ್ನ ನಾದಸಮಾಧಿಯು ಭಂಗವಾಯಿತು.' ಎಂದಂದು, ಒಂದರೆ
ತೊಲೆಯಷ್ಟರ ಸುಪ್ರಸಿದ್ಧ ನಶ್ಯವನ್ನು ನಾಸಿಕಾದ್ವಾರದೊಳಗೆ ತುರು
ಕಿಸಿ, ಪುನಃ ಸಮಾಧಿಸ್ಥರಾದರು.

ಗಾನವು ಉಚ್ಚಗತಿಗೇರಿತ್ತು. ಆ ಇಂಚರದೊಸರು ಆ ನವ
ತರುಣಿಯ ಹೃದಯಾಂತರಾಳದಿಂದ ಹೊರಹೊಮ್ಮಿ ಶ್ರೋತೃವೃಂದದ
ಕಿವಿಮನಗಳನ್ನು ಕೊರೆದು ಕೋಡಿವರಿಯಿತು. ಆದರಿಂದ ಆಹ್ಲಾದ
ಗೊಂಡ ಶ್ರೋತೃವರ್ಗವು ನಿಗುರಿದ ಕಿವಿಗಳನ್ನು ಮತ್ತೂ ನಿಗುರಿಸಿ,
ಗಾನವಿವಶವಾಗಹತ್ತಿತು.

ಭುಜಂಗರಾಯರು ಸ್ತಬ್ಧರಾಗಿ ಕುಳಿತಿದ್ದರು. ಆ ತರುಣಿಯು ಹಾಡುತಿದ್ದ ಯಮನ್ ಕಲ್ಯಾಣೀ ರಾಗದ ಸುಸಂಸ್ಕೃತ ಆಲಾಪನೆಯನ್ನು ಆಲಿಸಿ, ಅವರ ಮನಸ್ಸಿಗೇನೋ ಒಂದು ತರದ ಕಲ್ಪನೆಯುಂಟಾಗ ಹತ್ತಿತ್ತು. ಅದರಾ ಕಲ್ಪನೆಯ ಗಾಢತೆಯಲ್ಲಿ ಎದುರಿಗೆ ತರುಣಿಯು ಹಾಡುತ್ತಿರುವಳೆಂಬ ವಿಷಯವೂ ಅವರ ಮನಸ್ಸಿನಿಂದ ಮಾಸಿ ಹೋಯಿತು.

ಅಕಸ್ಮಾತ್ ಯಮನ್ ಕಲ್ಯಾಣಿಯ ಆಲಾಪನೆಯು ಇಳಿತಕ್ಕೆ ಬಂದು, ಕೊನೆಗೆ ನಿಂತುಬಿಟ್ಟಿತು. ಭುಜಂಗರಾಯರು ವಿಚಾರ ತಂದ್ರಿಯಿಂದೆಚ್ಚತ್ತು, ನೋಡಿದರು. ಯುವಗಾಯಕಿಯು ತನ್ನ ಶ್ರಮ ಪರಿಹಾರಕ್ಕೋಸುಗ ಒಂದಿಷ್ಟು ಬಿಸಿನೀರನ್ನು ಕುಡಿಯಲು ಗಾಯನ ವನ್ನು ನಿಲ್ಲಿಸಿದ್ದಳು.

ಐದು ನಿಮಿಷಗಳು ಕಳೆದುವು; ತರುಣಿಯು ಮಗುದೊಮ್ಮೆ ಗಾಯನವನ್ನಾರಂಭಿಸಿದಳು. ಆದರೆ ಹಿಂದಿನ ಯಮನ್ ಕಲ್ಯಾಣಿಯ ರಾಗವಲ್ಲ; ಈ ಸಲ ಭೈರವಿಯಲ್ಲಿ!

ಭುಜಂಗರಾಯರು ಅಕಸ್ಮಿತವಾಗಿ ಗಾಬರಿಯಾದರು. ಏಕೆಂದು ಅವರಿಗೂ ಅರಿಯದು. ಅವುದೋ ಒಂದು ಅಜ್ಞಾತ ನೆನೆಹು ತನ್ನ ಮನವನ್ನು ಚುಚ್ಚುತ್ತಿರುವಂತೆ ಅವರಿಗೆ ಭಾಸವಾಯಿತು; ಅದರ ಬೇಗೆಯು ತಡೆಯಲಸದಳವಾಯಿತು.

ಭೈರವೀ ರಾಗದ ಆಲಾಪನೆಯು ಭರದಲ್ಲಿ ಸಾಗಿತ್ತು. ಒಂದು ವಿಶಾಲ ಬಯಲಲ್ಲಿನ ಏರುತಗ್ಗುಗಳಂತೆ ಅದು ಹಲವೊಮ್ಮೆ ಮಂದ್ರ ಸಪ್ತಕಕ್ಕಿಳಿದು, ಮಗುದೊಮ್ಮೆ ತಾರಸಪ್ತಕಕ್ಕೇರಿ, ಜನರ ಮನವನ್ನು ನಾದವೇದದೆಡೆ ಆಕರ್ಷಿಸಿ, ಮೆರೆದಾಗ, ಅಯ್ಯೋ; ಅದೊಂದು ನೆನಹು ಭುಜಂಗರಾಯರ ಮನವನ್ನು ಕೊರೆಯುತ್ತಿತ್ತು.

* * * *

ಗಾನಸುಧಾಕರ, ಅಭಿನವ ತಾನಸೇನ ಮುಂತಾದ ಬಿರುದುಗಳು ಆಗ ಭುಜಂಗರಾಯರವಾಗಿದ್ದುವು; ಅವರ ದೇವಲೋಕದ ಗಾಯನ ವನ್ನಾಲಿಸಲು, ಊರುಪರಊರುಗಳಿಂದ ಅಸಂಖ್ಯ ಜನರು ರಾಯರ

ಮನೆಗೆ ಬರುತ್ತಿದ್ದರು. ರಾಯರ ಗಾನವೆಂದರೆ ಜಗತ್ಪ್ರಸಿದ್ಧವಾದ ಗಾನ; ಅದು ಅದ್ವಿತೀಯ!

ಹಾಡುವುದು ಭುಜಂಗರಾಯರ ಜನ್ಮಸಿದ್ಧವಾದ ಹಕ್ಕೋ ಏನೋ; ನಾನರಿಯೆ! ಹಾಡಲು ತೊಡಗಿದರೆಂದರೆ ಅವರ ವಾಣಿಯಲ್ಲಿ ಸರಸ್ವತಿಯೇ ನೆಲಸುವಳು; ಅದರಿಂದ ಅವರಿಗೊಂದು ತರದ ಆವೇಶವುತ್ಪನ್ನವಾಗುವುದು; ಇಹಲೋಕದ ಪರವೆಯೂ ಕಳಚಿ ಹೋಗುವುದು. ಅವರಾ ತನುಮನವೆಲ್ಲವೂ ನಾದದ ಗುಡಿಯ ದ್ವಾರದಲ್ಲಿ ಒಲಿದುಲಿದು ನರ್ತಿಸುವುದು. ಅವರ ಆ ಭಾವಗಗನದಲ್ಲಿಯ ನಾದದಗುಡಿಯ ಭಕ್ತಿ ಗೋಪುರಗಳೂ, ಅವರ ಕಂಠದೊಸರಲ್ಲಿ ನೆಲೆಸಿದ್ದ ಸರಸ್ವತಿಯ ಸರಸತೆಯೂ, ಕೇಳುವವರ ಮನವನ್ನು ಎತ್ತಲೋ ಸೆಳದೊಯ್ಯುವುದು.

ಇಡೀ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಭುಜಂಗರಾಯರನ್ನು ಗಾಯನದಲ್ಲಿ ಸರಿಗಟ್ಟುವವರಿದ್ದಿಲ್ಲ. ಎಷ್ಟೋ ವಿದ್ವಾಂಸರು ಅವರನ್ನು ಕೆಣಕಿ, ಅಪಮಾನಿತರಾಗಿ ಹಿಂದೆ ಹೋದದ್ದೂ ಇದೆ. ಅವರ ಸಂಗೀತವನ್ನು ಆಲಿಸಿದವರೆಲ್ಲರೂ ಸಂಗೀತವೆಂದರೆ ಅವರ ವೈಶಿಷ್ಟ್ಯ ಎನ್ನುತಿದ್ದರು.

ಆದರೆ ರಾಯರಿಗೆ ಅಸೂಯೆ ಬಹಳ. ತನಗಿಂತ ಯಾರಾದರೂ ಸಂಗೀತದಲ್ಲಿ ಮಿಗಿಲೆಂದರೆ ಅವರಿಗೆ ಶತವೃಶ್ಚಿಕಗಳು ಕಡಿದಂತಾಗುತಿದ್ದಿತು. ಅನಂತರ ಅವನನ್ನು, ಸಂಗೀತದಲ್ಲಲ್ಲವಾದರೆ ವಾದದಲ್ಲಿಯಾದರೂ, ಸೋಲಿಸದೆ ಬಿಡುತ್ತಿದ್ದಿಲ್ಲ. ಎಂದರೆ ಅವರ ಮುಖಸ್ತುತಿಯನ್ನು ಮಾಡಬೇಕೆಂದು ಅವರಿಷ್ಟವಲ್ಲ; ಹೆರವರನ್ನು ಹೊಗಳದಿದ್ದರಾಯಿತು.

ಭುಜಂಗರಾಯರಲ್ಲಿ ಎಷ್ಟೋ ಜನ ವಿದ್ಯಾರ್ಥಿಗಳು ಬಂದು ನಿರಾಶರಾಗಿ ತೆರಳಿದ್ದರು. ಅರಸು ಮಕ್ಕಳಂತಿರುವ ಧನಿಕರ ಕೋಶದ ಲೆಕ್ಕವೇ ಭುಜಂಗರಾಯರೊಡನೆ ಉಸುರಲಾಗುತಿತ್ತು. ತಿಂಗಳಿಗೆ ಐನೂರು; ಎಂಟುನೂರು . . . ಛೀ! ರಾಯರ ಮನಸ್ಸೊಂದೆ! ನಾಲಗೆಯೊಂದೆ! 'ಕುಬೇರನು ತನ್ನ ಕೋಶವನ್ನು ರಾಯರಿಗೊಪ್ಪಿಸಿದರೂ ತಾನಾರಿಗೂ ಗಾನಶಿಕ್ಷಕನಾಗಲಾರೆ.'

ಶಿಕ್ಷಣವಿಚಾರದಲ್ಲಿ ರಾಯರು ಇಷ್ಟು ನಿಷ್ಠುರರಾದರೂ ಅವರು ಸೌಮ್ಯಮೂರ್ತಿ! ಶಾಂತಿಮಯವಾದ ಆ ವಿಶಾಲ ಬೊಗಸೆಗಣ್ಣುಗಳು; ಆತ್ಮಪ್ರೌಢಿಮೆಯನ್ನು ಬೀರುವ ಅಗಲವಾದ ಹಣೆ; ಕಾವ್ಯ ನಿರ್ಝರದ ಮತ್ತು ಆಕರ್ಷಕ ನಾದಝರಿಯ ಸಂಗಮವಾದ ಬಾಯಿ; ಸರಸ್ವತಿ ಯೊಲವನ್ನು ತೋರುವ ಸುಪುಷ್ಟವಾದ ಕಂಠ; ಎತ್ತರಕ್ಕೆ ತಕ್ಕ ಅಗಲ ವಾದ ದೇಹಯಷ್ಟಿ; ಇವು ನೋಟಕರ ಮನಸ್ಸನ್ನು ಅವರಾ ಸುಂದರ ಮೂರ್ತಿಯಲ್ಲಿ ತಲ್ಲೀನವಾಗುವಂತೆ ಮಾಡುತ್ತಿದ್ದವು.

ರಾಯರ ಗೃಹಿಣಿಯ ಹೆಸರು ಸುಶೀಲೆ! ಸುಶೀಲೆಯು ಹೆಸರಿಗೆ ತಕ್ಕಂತೆ ಸುಶೀಲೆಯಾಗಿಯೇ ಇದ್ದಳು. ತನ್ನ ಪತಿಯ ಕಾರ್ಯಗಳಲ್ಲಿ, ಅವರ ಸುಖದುಃಖಗಳಲ್ಲಿ, ತಾನೂ ಭಾಗವಹಿಸಿ, ಇದ್ದುದರಲ್ಲೆ ತೃಪ್ತಿಯ ನ್ನಾಂತು, ತನ್ನ ಪಾಡಿನಲ್ಲೇ ತಾನಿದ್ದಳು.

ಶಾಂತೆಯು ರಾಯರ ಮಗಳು. ಎಲ್ಲರಂತೆಯೇ ಹುಟ್ಟಿದ್ದಳು; ಬೆಳೆ ದಿದ್ದಳು. ಆರನೆಯ ವತ್ಸರದಲ್ಲಿ ಕಾಲಿಟ್ಟಿದ್ದಳು.

ಆಕೆಯದು ಮಧುರ ರೂಪು! ಬಾಲಿಕೆಯ ಭಾಸಹಾಸಗಳನ್ನು ಇದ್ದಕಿದ್ದಂತೆಯೇ ತೋರುವ ಕೆಂದುಟಿಗಳೆರಡು ಸದಾ ಸಸ್ಮಿತವಾಗಿಯೇ ಇದ್ದುವು; ಮತ್ತೊಂದು ವಿಶೇಷವೆಂದರೆ ಶಾಂತೆಯ ಕೊರಳದನಿಯು ಗಾನ ಸುಧಾಕರ ಭುಜಂಗರಾಯರ ಕೊರಳಿಂಚರವೇ ಆಗಿತ್ತು.

ಭುಜಂಗರಾಯರು ಶಾಂತೆಯನ್ನು ಬಹಳವಾಗಿ ಪ್ರೀತಿಸುತಿದ್ದರು- ಬೇಡಿದುದನ್ನಿತ್ತು, ಕೇಳದುದನ್ನು ತೆತ್ತು, ಆಕೆಯ ಸೌಖ್ಯವೇ ತನ್ನ ಸೌಖ್ಯವೆಂದು ಬಗೆದು, ಆಕೆಯು ತನ್ನ ನುಣ್ದನಿಯಿಂದ 'ತಾಲಮ್ಮಯ್ಯಾ, ತಂದು ತೋಲಮ್ಮಯ್ಯಾ!' ಎಂದು ಬಾಲ ಭಾಷೆಯಲ್ಲಿ ಹಾಡಿದಾಗ, ಅದೊಂದು ಅನಿರ್ವಚನೀಯ ಆನಂದಲಹರಿಯು ಅವರ ಹೃದಯಾಂತ ರಾಳದಲ್ಲುದ್ಭವಿಸಿ, ಆಕೆಯ ಚೆಂದುಟಿಗಳ ಚುಂಬನದಲ್ಲೇ ಪರ್ಯವಸಾ ಯಿಯಾಗುತಿತ್ತು.

ರಾಯರ ಗಾಯನ ಕಚೇರಿಗಳು ಊರಲ್ಲಿ ಅನೇಕ ಜರುಗುತಿದ್ದುವು. ಅವುಗಳಿಗೆ ರಾಯರು ಮುದ್ದಿನ ಶಾಂತೆಯನ್ನೂ ಕರೆದುಕೊಂಡು ಹೋಗು ತಿದ್ದರು. ಬಾಲೆಯು ತನ್ನ ಗಾನವನ್ನಾಲಿಸಿ ಸಂತಸಪಡಲೆಂಬುದೇ ಅವರ ಆಸೆ. ಆದರೆ ಶಾಂತೆಯ ಮನಸ್ಸು ಬರೇ ಗಾನಶ್ರವಣದಿಂದ ಮೈ ಮರೆವ ಮನಸ್ಸಲ್ಲ; ತಂದೆಯೊಂದುತಿದ್ದ ಆ ಅಪೂರ್ವ ಆನಂದ ದಲ್ಲಿ ಭಾಗಿಯಾಗಬೇಕೆಂದು ಹಟತೊಟ್ಟ ಮನಸ್ಸವಳದು.

ರಾಯರ ಪ್ರೀತಿಯ ರಾಗವು ಭೈರವಿ. ಎಂತಹ ಸಮಯದಲ್ಲಾ ದರೂ ರಾಯರ ಕಂಠದಿಂದ ಗಾನದೊಸರು ಹರಿದಿಳಿವುದಾದರೆ, ಮೊದ ಲಾಗಿ ಭೈರವಿಯಲ್ಲಿ ಸರಸ್ವತೀ ಮಾತೆಯ ಸ್ತುತಿ! ಎರಡನೆಯದು ಅವರ ಪ್ರೀತಿಯ ಪದ್ಯ 'ಜಗದೇಕ ವೀರಾ; ಸಕಲ ಗುಣ ಸಾರ!'

ಶಾಂತೆಯು ಪ್ರತ್ಯುತ್ಪನ್ನಮತಿಯಾಗಿದ್ದಳು. ಶಾಲೆಯಲ್ಲಿ ತನ್ನ ವರ್ಗದಲ್ಲಿ ಮೊದಲನೆಯವಳಾಗಿದ್ದಳು. ಉಪಾಧ್ಯಾಯಿನಿಯರೆಲ್ಲರಿಗೂ ಅಚ್ಚುಮೆಚ್ಚಿನವಳಾಗಿದ್ದಳು. ಉಪಾಧ್ಯಾಯಿನಿಯರು ಆಕೆಯಲ್ಲಿ ಮೆಚ್ಚಿ ದುದಿಷ್ಟೆ:—ಒಮ್ಮೆ ಕಲಿತರೆ, ಅದನ್ನು ಶಾಂತೆಯು ಮತ್ತೆ ಮರೆಯಳು.

ಗಾಯನದಲ್ಲಿ ತಂದೆಯು ನಿಪುಣ! ಅಂದಮೇಲೆ ಅದೇ ಹುಚ್ಚು ಮಗಳಿಗೆ ಹಿಡಿದುದರಲ್ಲಿ ಅಚ್ಚರಿಯೇನು? ಹಲವೊಮ್ಮೆ ಬೇಸರವಾದಾಗ ಮನೆಯ ಹಿಂದಿನ ತೋಟದಲ್ಲಿ ಏಕಾಕಿನಿಯಾಗಿ ಯೋಚಿಸುತ್ತ ಕುಳ್ಳಿರು ವಳು; ಆಗ ಹಠಾತ್ ಆಕೆಯ ಆ ಕಿನ್ನರ ಕಂಠದಿಂದ ರಾಗದೊಸರು ತಾನಾಗಿ ಹರಿದು ಬರುವುದು. ಅದರಲ್ಲೊಂದು ಜೀವಕಲೆಯಿದ್ದು, ಅದು ಸುತ್ತಲಿನ ವಾತಾವರಣವನ್ನು ಗಾನಮಯವನ್ನಾಗಿ ಮಾಡಿ, ಮೃಗ ಪಕ್ಷಿ ತರುಲತೆಗಳು ತಲೆದೂಗುವಂತೆ ಹರಡುತಿದ್ದಿತು.

ಆದರೆ ಗಾನಶಿರೋಮಣಿಯಾಗುವುದು ಶಾಂತೆಯ ಒಡಕು ಅದೃಷ್ಟ ದಲ್ಲಿ ಬರೆದಿರಲಿಲ್ಲ. ಗಾನ ಕಲಿಯಲು, ಜೀವಿತ ಗಾನದ ಸುಗ್ಗಿಯನ್ನು ಈ ವಾತಾವರಣದಲ್ಲಿ ಹಬ್ಬಿಸಲು, ವಿಧಿಯ ಕ್ರೂರಾಜ್ಞೆಯು ಕೂಡ ದೆಂದೇ ಇದ್ದಿತು. ಅಂದಮೇಲೆ ಅದನ್ನತಿಕ್ರಮಿಸುವುದು ಅಸಾಧ್ಯ!

ತಾಯಿಯೊಲವು ಮಗಳ ಕಡೆಗಿತ್ತು. ಮಗಳು ಎರಡು ಹಾಡುಗಳನ್ನು ಕಲಿತು, ಜನರಿಂದ ಸೈಗುಟ್ಟುವಂತೆ ಹಾಡಿದರೆ, ಅದರ ಸಂತೋಷವಾರ ಪಾಲಿನದು? ಹೆತ್ತವರ ಎಂಬುದು ನಿರ್ಬೋಧವಾದ ಉತ್ತರ. ಆದರೆ ತಂದೆಯ ಮನಸ್ಸು ಕಲ್ಲು; ಕಠಿಣ ಕಲ್ಲು! 'ಪುತ್ರಾತ್ ಇಚ್ಛೇತ್ ಪರಾಜಯಂ' ಎಂಬ ವಾಕ್ಯವು ರಾಯರ ತಲೆಯಲ್ಲಿ ಹೊಕ್ಕದಾಯಿತು. 'ಕಲಿತು, ಕೀರ್ತಿವಂತೆಯಾದರೆ ಶ್ರೇಯಸ್ಸು ತಮಗೆ ಅಲ್ಲವೇ?' ಎಂದಳೊಮ್ಮೆ ರಾತ್ರಿಯೂಟವಾದ ಮೇಲೆ ತಾಯಿ.

'ತಿಳಿದಿದೆ. ಆದರೆ ನಾನಾರಿಗೂ ಕಲಿಸಲಾರೆ!'

'ಯಾರಿಗಾದರೂ ಕಲಿಸುವುದಿಲ್ಲವಾದರೆ ಬಿಟ್ಟುಬಿಡಿ. ಮಗಳಿಗೆ- ಹೆತ್ತ ಕರುಳಿಗೆ ಕಲಿಸುವುದರಲ್ಲಿ ಅಭ್ಯಂತರವೇನು?'

'ಅದೆಲ್ಲ ನಿನಗೇಕೆ? ನನ್ನ ಕೀರ್ತಿಯನ್ನು ಕೇಳಿ, ಸಂತಸಗೊಂಡರೆ ಸಾಕು. ಮಗಳ ಕೀರ್ತಿಯು ಬೇಕಿಲ್ಲ.'

'ಅದೇಕೆ ಹಾಗೆನ್ನುವಿರಿ? ನಿಮಗೆ ಯಾವಾಗಲೂ ಇದೇ ಸ್ಥಿತಿಯುಳಿಯುವುದೇ? ಮುಪ್ಪು ಬಂದು, ಹಲ್ಲುದುರಿ, ತನು ಶಿಥಿಲವಾದಾಗ, ಈ ಗಾನದೇವಿಯನ್ನು ಅನಾಥೆ........'

'ಛೆ! ಬಾಯ್ಮುಚ್ಚು!'

ರಾತ್ರಿಯ ಹನ್ನೊಂದು ಗಂಟೆಯ ತನಕ ಮಾತನಾಡಿದುದರ ಫಲವು ಕಂಠಶೋಷಣೆಯಲ್ಲದೇ ರಾಯರ ಮನಸ್ಸೇನೂ ತಿರುಗಲಿಲ್ಲ. ಅವರು ಹಿಂದಿನಂತೆಯೇ ದೃಢಮನಸ್ಕರಾಗಿದ್ದರು.

೨

ಸಂಧ್ಯಾಸಮಯದಲ್ಲಿ ಶಾಂತೆಯು ಶಾಲೆಯಿಂದ ಮನೆಗೆ ಎಂದಿನಂತೆ ಬಂದಳು. ಆದರೆ ಇಂದು ಆಕೆಯ ಮನದಲ್ಲೇನೋ ಒಂದು ತರದ ಅನಿರ್ವಚನೀಯ ಆನಂದೋಲ್ಲಾಸಗಳು ತುಂಬಿಕೊಂಡಿದ್ದುವು. ಮನೆಯನ್ನು ಹೊಕ್ಕವಳೇ ಶಾಂತೆಯು 'ಅಮ್ಮ!' ಎಂದು ಕೂಗಿದಳು.

'ಏನು ಮಗೂ!'

'ಇನ್ನೈದು ದಿನಗಳಲ್ಲಿ ನಮ್ಮ ಶಾಲೆಯಲ್ಲಿ ವರ್ಧಂತ್ಯುತ್ಸವವಿದೆ? ನಾನೂ ಗಾಯನ ಹಾಡಬೇಕಂತೆ ಅಮ್ಮ !'

ತಾಯಿಯಿಂದ ಬಿಸಿಯುಸಿರೊಂದೇ ಉತ್ತರ.

'ಏನಮ್ಮ? ಒಂದು ಪದ್ಯವನ್ನು ಹಾಡಲು ಕಲಿಸಲು ತಂದೆಯ್ಹುವ ರೊಡನೆ ಹೇಳುವೆಯೇನಮ್ಮ?'

ನಿಟ್ಟುಸಿರು! ಮಗುದೊಮ್ಮೆ !!

'ಏಕಮ್ಮ ಸುಮ್ಮನಿರುವೆ?'

ತಂದೆಯ ಮನಸ್ಥಿತಿಯನ್ನು ಮಗಳಿಗೆ ಬಿಚ್ಚಿ, ಹೇಳದಾದಳು ತಾಯಿ. ಕಂಬನಿಯೊರಸಿ 'ಹೇಳುವೆ ಮಗೂ!' ಎಂದಳು.

ಶಾಂತೆಯು ಸಂತಸಹೊಂದಿದಳು. ತಾಯಿಯು ಅಡಿಗೆಯ ಕೋಣೆಯತ್ತ ತೆರಳಿದಳು.

ಶಾಂತೆ—ಪಾಪ; ಮುಗ್ಧೆ! ತಂದೆಯು ಗಾನಶಿರೋಮಣಿ! ಅಖಿಲ ಭಾರತೀಯ ಸಂಗೀತ ಪರಿಷತ್ತಿನಲ್ಲಿ ಮಹಾವಿದ್ವಾಂಸರನ್ನು ಸೋಲಿಸಿ ಮೆರೆದ 'ಅಭಿನವ ತಾನಸೇನ!' ಅವರಿಂದ ತಾನೂ ಒಂದೆರಡು ಹಾಡು ಗಳನ್ನು ಕಲಿತು, ವರ್ಧಂತ್ಯುತ್ಸವದ ದಿನ ಮೆರೆಯಬೇಕೆಂದೇ ಅವಳಾಸೆ.

ರಾತ್ರಿ ಎಂಟು ಗಂಟೆಯು ಹೊತ್ತಿಗೆ ರಾಯರು ಮನೆಗೆ ಮರಳಿ ದರು. ಕೈಕಾಲು ತೊಳೆದು, ಊಟಕ್ಕೆ ಎಲೆಯ ಮುಂದೆ ಕುಳಿತಾಗ ಗೃಹಿಣಿಯು ಶಾಂತೆಯ ಪ್ರಸ್ತಾಪವನ್ನೆತ್ತಿದಳು.

ರಾಯರೊಮ್ಮೆ ದಿಗಿಲುಗೊಂಡರು; 'ಹಾಡಲಿ! ಅದರಲ್ಲೇನು?'

'ಒಂದೆರಡು ಹಾಡುಗಳನ್ನು ಕಲಿಸಿದರೆ........'

ರಾಯರು ಗೃಹಿಣಿಯನ್ನು ತೀಕ್ಷ್ಣದೃಷ್ಟಿಯಿಂದ ದಿಟ್ಟಿಸಿದರು. 'ಹಾಡುವಳಾದರೆ ಹಾಡಲಿ; ಆಕ್ಷೇಪವಿಲ್ಲ. ಆದರೆ ನಾನು ಕಲಿಸಿ ಕೊಡಲಾರೆ'.

ಗೃಹಿಣಿಯ ಕಣ್ಣುಗಳು ನೀರಿರಿಗಿಂಬಿತ್ತುವು. 'ಏಕೆ ಹಾಗೆನ್ನುವಿರಿ ಬಾಲಿಕೆಯ ನವಉತ್ಸಾಹಲತೆಯನ್ನು ಕಡಿಯುವಿರಾ?'

'ಅಹುದು'. ಕರ್ಕಶವಾಗಿತ್ತು ದನಿ.

ಗೃಹಿಣಿಯು ಮತ್ತೆ ಮಾತನಾಡಲಿಲ್ಲ. ಯಾಕೆಂದರೆ ತಾನು ಅದರ ವಿಷಯವಾಗಿ ಮಾತನಾಡಿದಷ್ಟೂ, ಅವರ ಕ್ರೋಧವೇರುವುದೆಂಬುದನ್ನು ಆಕೆಯು ತಿಳಿದಿದ್ದಳು. ಅಲ್ಲದೆ ಆ ಬಾಲೆಯ ನುಡಿಯಲ್ಲಿನ ಮಹತ್ವವು ಆಗ ಆಕೆಗೆ ಹೊಳೆಯಲಿಲ್ಲ.

ವರ್ಧಂತ್ಯುತ್ಸವವು ಚೆನ್ನಾಗಿ ನಡೆಯಿತು. ಅಂದಿನ ಕಾರ್ಯಕಲಾಪಗಳಲ್ಲಿ ಬರೀ ಆರು ವರ್ಷದ ಬಾಲಿಕೆಯಾದ ಶಾಂತೆಯು ಭಾಗವಹಿಸಿದುದನ್ನು ಕಂಡು, ಪ್ರೇಕ್ಷಕರೆಲ್ಲರಿಗೂ ಆಶ್ಚರ್ಯವಾಯಿತು. ಆಕೆಯಂದು ಹಾಡಿದ ಗಾಯನವು ಕಲಿಸಿಕೊಟ್ಟ ಗಾಯನವಲ್ಲ; ಆಕೆಯದು ಅದು ಸ್ವರ್ಗೀಯವಾದ ಆತ್ಮವಿದ್ಯೆ!

ಅಧ್ಯಕ್ಷರಾದ ಗಾನಪಟು ಶ್ರೀಮಾನ್ ವರದರಾಜರು ಶಾಂತೆಯನ್ನು ಬಹಳವಾಗಿ ಹೊಗಳಿದರು. ಅಲ್ಲದೆ, 'ಇಂತಹ ಒಂದು ಅಮೂಲ್ಯರತ್ನವನ್ನು ಪಳಗಿಸಿ, ಅದು ಬೆಳಗಿ ತೊಳಗುವಂತೆ ಮಾಡಿ, ಅದನ್ನು ಉದಾರರಾದ ಕನ್ನಡಿಗರ ಕರದಲ್ಲಿಯೂ, ಗಾನದೇವಿಯ ಕಾಲಡಿಯಲ್ಲೂ ಒಪ್ಪಿಸಿದ ಶ್ರೀಮಾನ್ ಗಾನಸುಧಾಕರ ಭುಜಂಗರಾಯರು ಅಭಿನಂದನೀಯರು. ಈ ಬಾಲಿಕೆಯು ಗಾಯನದಲ್ಲಿ ಇನ್ನೂ ಯಶಸ್ವಿತೆಯನ್ನು ಹೊಂದಿ, ತಂದೆಯ ಹೆಸರನ್ನು ಉಜ್ವಲಗೊಳಿಸಿ, ಮೆರೆಯಲೆಂದೇ ನಮ್ಮ ಹಾರೈಕೆ' ಎಂದೂ ಅಂದರು. ನೆರೆದವರು 'ತಂದೆಯನ್ನು ಸೋಲಿಸುವಳು ಮಗಳು!' ಎಂದರು. ಅಂತೂ ಸಂತಸದಲ್ಲಿ ಸಭಾವಿಸರ್ಜನೆಯಾಯಿತು.

ಶಾಂತೆಯು ಸಂತಸದಿಂದ ಪುಟಚೆಂಡಿನಂತೆ ನೆಗೆಯುತ್ತಾ ಮನೆಗೆ ಬಂದಳು. ಆಕೆಯ ಮೊಗದಲ್ಲಿಂದು ಪ್ರಬಲವೈರಿಯೊಡನೆ ಸಮರದಲ್ಲಿ ವಿಜಯಿಯಾಗಿ ಬಂದ ವೀರವರನ ಗೆಲವು ಮೂಡಿತ್ತು. ಆನಂದೋಲ್ಲಸಿತ ಮನದಲ್ಲಿ, ಇಂದಿನ ತನ್ನ ಯಶಸ್ವಿತೆಯನ್ನು ಕಂಡಾದರೂ ತಂದೆಯ ಮನದಲ್ಲಿ ಕರುಣೆಹುಟ್ಟಿ, ತನಗೆ ನಾಳೆನಿಂದ ಸಂಗೀತದ

ಅಭ್ಯಾಸವನ್ನು ಮಾಡಿಸಬಹುದೆಂದೂ ಯೋಚಿಸಿದಳು. ಅದಕ್ಕಾಗಿಯೇ ಮುಗ್ಧೆ!

ರಾಯರು ಆರಾಮಾಸನದ ಮೇಲೆ ಬಿದ್ದುಕೊಂಡು, ಏನನ್ನೋ ಯೋಚಿಸುತಿದ್ದರು. ಶಾಂತೆಯು ಒಳಹೊಕ್ಕವಳೇ ತಂದೆಯ ಸಮೀಪ ಸಾರಿ, 'ಅಪ್ಪಾ; ನಾನು ಚೆನ್ನಾಗಿ ಹಾಡಿದೆಯಂತೆ ಅಪ್ಪಾ!' ಎಂದು ನಗುತ್ತ ನುಡಿದಳು.

ರಾಯರು ಆಕೆಯನ್ನು ಬಿರುಗಣ್ಣಿಂದ ದಿಟ್ಟಿಸಿದರು ಮಾತ್ರ.

ರಾತ್ರಿಯ ಊಟಗಳಾದುವು. ಶಾಂತೆಯು ತನ್ನ ಓದುವ ಕೊಠಡಿಯಲ್ಲಿ ಕುಳಿತು, ಒಂದು ಚಿಕ್ಕ ಪದ್ಯಾವಲಿಯನ್ನೋದುತಿದ್ದಳು. ಅಕಸ್ಮಾತ್ ರಾಯರು ಶಾಂತೆಯನ್ನು ಕೂಗಿದಂತೆ ಕೇಳಿಸಿತು. ಶಾಂತೆಯು ರಾಯರ ಕೊಠಡಿಗೆ ಧಾವಿಸಿದಳು.

ರಾಯರು ದೀಪದೆದುರು ಕುಳಿತಿದ್ದರು. ಕೈಯಲ್ಲೊಂದು ಸಂಗೀತದ ಪುಸ್ತಕವಿತ್ತು. ಶಾಂತೆಯು ಬಂದುದನ್ನು ಕಂಡು, 'ಶಾಂತಾ, ಇಂದು ನೀನು ಹಾಡಿದಾಗ ಜನರೆಂದುದೇನು ಗೊತ್ತೇ?' ಎಂದರು.

ವಿಪರೀತ ಪ್ರಶ್ನೆ! ಶಾಂತೆಯು ಇಲ್ಲವೆಂದಳು.

'ಕೇಳು. ಮಗಳು ತಂದೆಯನ್ನು ಸೋಲಿಸುವಳು!'

ಶಾಂತೆಯು ನಾಚಿಕೆಯಿಂದ ಕೆಂಪೇರಿದಳು; ತಲೆವಾಗಿದಳು.

ರಾಯರು ಪಾಷಾಣಸದೃಶ ಕೈಗಳಿಂದ ಆಕೆಯ ತಲೆಯನ್ನು ಮೇಲಕ್ಕೆತ್ತಿದರು. 'ಶಾಂತಾ; ಇನ್ನು ನೀನು ಹಾಡಲಾಗದು!'

ಶಾಂತೆಯು ಕಾತರಳಾದಳು. 'ಅಪ್ಪಾ; ಅದೇಕೆ?'

'ಛೆ! ಬಾಯ್ಮುಚ್ಚು! ಆ ಪ್ರಶ್ನೆಯನ್ನು ಕೇಳುವ ಅಧಿಕಾರವು ನಿನಗಿಲ್ಲ. ಆದರೆ ಇಂದಿನಿಂದ ಮುಂದೆ ನೀನೆಂದಾದರೂ ಹಾಡತೊಡಗಿದೆಯೆಂದರೆ, ಈ ನಿನ್ನ ತಂದೆಯ ಹೃದಯವು ಕಲ್ಲು!'

'ಅಪ್ಪಾ; ದಿನಕ್ಕೊಂದಾವರ್ತಿ ಹಾಡುವೆನು...........' ಶಾಂತೆಯ ಕಣ್ಣುಗಳಲ್ಲಿ ನೀರು ಧಾರಾಕಾರವಾಗಿ ಹರಿಯುತಿತ್ತು; ಕಾತರಳಾಗಿದ್ದಳು-

ರಾಯರು ವಿಕಟವಾಗಿ ನಕ್ಕರು. 'ದಿನಕ್ಕೊಮ್ಮೆ ಬೇಡ; ವರ್ಷ ಕ್ಕೊಮ್ಮೆ ಬೇಡ; ಹಾಡಲೇ ಬೇಡ! ಹಾಡಲಾಗದು!'

ಶಾಂತೆಯ ದೃಷ್ಟಿಯಲ್ಲಿ ಆರ್ಜವದ ಭಾವವಿತ್ತು.

'ಕೇಳಿತೇ? ಇನ್ನೆಲ್ಲಾದರೂ ಹಾಡಿದರೆ, ಅಥವಾ ನೀನು ಹಾಡಿದೆ ಯೆಂಬುದಿನ್ನ ಕಿವಿಗೆ ಬಿದ್ದರೆ, ಅನಂತರ ನನ್ನ ಈ ಹೃದಯವು............ ಹೇಳಲಾರೆ! ಶಾಂತಾ! ಬರೇ ಕಲ್ಲು! ಬಂಡೇ ಕಲ್ಲು! ಅರಿತೆಯಾ?"

ಶಾಂತೆಯೇನೆಂದು ಉತ್ತರವೀವಳು?

'ಶಾಂತಾ; ಅರಿತೆಯಾ?..... ನಿನ್ನ ಆ ಶಾಕ ಕಂಠದಿಂದ ಒಂದೇ ಒಂದು ರಾಗವು ನನ್ನ ಕಿವಿಗೆ ಬಿದ್ದರೆ, ನಿನ್ನ ಪರಿಣಾಮವು ನೆಟ್ಟಗಾಗ ಲಿಕ್ಕಿಲ್ಲ; ಆಗ ನೀನಾರೆದುರು ನಿಂತಿರುವೆಯೋ ಅವನು ನಿನ್ನ ತಂದೆ ಯಲ್ಲ............ಅದೋ, ಅತ್ತ ನೋಡು.'

ಶಾಂತೆಯು ನೋಡಿದಳು—ಅಲ್ಲೇ ಇದ್ದ ಹಲಗೆಯೊಂದರಿಂದ ಚಾಟಿಯೊಂದು ಹೊರಗಿಣುಕುತಿತ್ತು.

ಶಾಂತೆಯು ರಾಯರ ಕಲ್ಲುಮನಸ್ಸನ್ನಿಂದು ಅರಿತಳು.

ಕೈಯ ಹಿಡಿತವು ಸಡಿಲಾಗಲು, ಶಾಂತೆಯು ತನ್ನ ಕೊಠಡಿಗೆ ಬಂದಳು. ದೀಪವನ್ನು ನೊಂದಿಸಿ, ಮಲಗಿಕೊಂಡಳು. ನಿದ್ರಾ ದೇವಿಯು ವಶಳಾಗಲೊಲ್ಲಳು. ಪ್ರಾತಃಕಾಲದ ನಾಲ್ಕು ಗಂಟೆಯ ಸಮಯಕ್ಕೆ ಏನೋ ಜಂಪುಹಿಡಿದಂತಾಗಲು, ಕನಸಿನಲ್ಲಿ ಆ ಚಾಟಿಯ ಹಿಡಿಯನ್ನು ಕಂಡು, ಚಿಟ್ಟನೆ ಚೀರಿದಳು.

* * *

ಐದು ದಿನಗಳು ಕಳೆದಿವೆ. ರಾಯರಿಗೂ ಸುಶೀಲೆಗೂ ಮನಸಿ ನಲ್ಲಿಂದು ನೆಮ್ಮದಿಯಿಲ್ಲ. ಕಾರಣವಿಷ್ಟೆ—ಶಾಂತೆಯನ್ನು ಭೀಕರವಾದ ಜ್ವರವೊಂದು ಹಿಡಿದಿತ್ತು.

ರಾಯರಿಗಿಂದು ಪಶ್ಚಾತ್ತಾಪವಾಗಿದೆ. ತಾವು ಅಂದು ರಾತ್ರಿ ಶಾಂತೆಯನ್ನು ಗದರಿಸಿ, ಚಾಟಿಯನ್ನು ತೋರಿದುದೇ ಆಕೆಯ ರೋಗಕ್ಕೆ

ಕಾರಣವಾಯಿತೆಂದು ತಿಳಿದಿದ್ದರು. ಆದರೆ ಮಿಂಚಿ ಹೋದ ಕಾರ್ಯಕ್ಕೆ ಚಿಂತಿಸಿ ಫಲವೇನು?

ವೈದ್ಯರು ಧೈರ್ಯವಿಲ್ಲವೆಂದು ನಿನ್ನೆಯೇ ತಿಳಿಸಿದ್ದರು. ಅದು ಕಾರಣ ತಂದೆ ತಾಯಿಗಳಿಬ್ಬರೂ ಮಗಳ ರುಗ್ಣಶಯ್ಯೆಯ ಬಳಿಯಲ್ಲಿ ಆಹಾರ ವಿಚಾರಗಳನ್ನೆಣಿಸದೆ, ಹಗಲಿರುಳು ಕಂಬನಿದುಂಬುತ್ತ, ಕುಳಿತಿದ್ದರು. 'ಅಯ್ಯೋ, ಒಮ್ಮೆ ಶಾಂತೆಯು ಗುಣಮುಖಳಾದರೆ...........' ರಾಯರ ಮನಸ್ಸಿನಲ್ಲೇನೇನೋ ವಿಚಾರತರಂಗಗಳು ಮೂಡುತಿದ್ದವು.

ಶಾಂತೆಯು ಮುಚ್ಚಿದ ಕಣ್ಣುಗಳನ್ನು ತೆರೆಯದೆ ಮೂರು ದಿನಗಳಾಗಿದ್ದವು. ಆಕೆಯ ಮೈ ಜ್ವರದ ಬೇಗೆಯಿಂದ ಬೇಯುತಿತ್ತು. ಬಿಸಿಯುಸಿರು ನಿಮಿಷಕ್ಕೊಮ್ಮೆ ಫೂತ್ಕಾರದೊಡನೆ ಹೊರಬಂದಾಗ, ತಂದೆ ತಾಯಿಗಳ ಮೈಯೊಮ್ಮೆಗೇ ಜುಮ್ಮೆಂದಾಗುತಿತ್ತು. ದಿನಕ್ಕೊಮ್ಮೆ ಒಂದಿಷ್ಟು ಹಾಲನ್ನು ಆಕೆಯ ಬಾಯಿಗೆರೆದಾಗ, ಅದು ಉದರವನ್ನು ಸೇರದೆ, ಹೊರಗೆ ಬರುವುದನ್ನು ಕಂಡು, ಅವರ ಕರುಳು ಕೂಗುತಿತ್ತು.

ರಾತ್ರಿ ಹತ್ತು ಗಂಟೆಯ ಸಮಯಕೊಮ್ಮೆ ಶಾಂತೆಯು ತನ್ನ ಕಣ್ಣುಗಳನ್ನು ತೆರೆದಳು. ರಾಯರಿಗೆ ಜಂಪುಹತ್ತಿತ್ತು. ತಾಯಿಯು ತಲೆದೆಸೆಯಲ್ಲಿ ಕುಳಿತಿದ್ದಳು. ಸ್ವಲ್ಪ ದೂರ ಪವಡಿಸಿದ್ದ ರಾಯರು ಆಕೆಯ ಕಣ್ಣಿಗೆ ಬೀಳಲಿಲ್ಲ. ತಾಯಿಯನ್ನು ಕಂಡಳು. 'ಅಮ್ಮಾ; ಅಪ್ಪನೆಲ್ಲಿ?'

ರಾಯರು ಸಮೀಪಕ್ಕೆ ಬಂದರು.

'ಅಪ್ಪಾ; ನಾನಿನ್ನು ಹಾಡಲೇ? ಮೇರೇ ಮೌಲಾ ಬೋಲಾ........ ಹಾಡಲೇನಪ್ಪ?'

ಬರ್ಚಿಯಿಂದ ತಿವಿದಂತಾಯಿತು ರಾಯರಿಗೆ. ಅವರ ಕಣ್ಣುಗಳಿಂದ ನೀರಿಳಿಯಿತು. 'ಹಾಡು, ಮಗೂ! ಹಾಡು. ಮನದಾಸೆಯು ಇಂಗಿಹೋಗುವ ತನಕ ಹಾಡು.'

'ಅಪ್ಪಾ; ಹಾಡಿದರೆ ಚಾಟಿಯಿಂದ ಹೊಡೆವುದಿಲ್ಲವೇ?'

ರಾಯರು ಗಳಗಳನೇ ಅತ್ತರು. 'ಇಲ್ಲ, ಮಗೂ! ಇಲ್ಲ.'

ಶಾಂತೆಯು ಕ್ಷೀಣಸ್ವರದಿಂದ ರಮ್ಯವಾದ ಭೈರವಿ ರಾಗದಲ್ಲಿ ತನ್ನ ಅಂತಿಮ ಗೀತವನ್ನು ಹಾಡಿದಳು. ಅದು ಕೊನೆಗಾಣುತ್ತ ಬಂದ ಹಾಗೆ, ಆ ದನಿಯೊಡನೆ ರಾಯರ ಕಂಠವೂ ಸೇರಿ, ಸುತ್ತಲಿನ ಶಾಂತ ವಾತಾವರಣದಲ್ಲಿ ಲೀನವಾಯಿತು. ಅದುವೇ ಶಾಂತೆಯ ಚರಮ ಗೀತವಾಯಿತು.

* * *

ಸಭಾ ಸ್ಥಾನದ ನಡುವಿನಲ್ಲಿ ಮಂಡಿತಳಾದ ತರುಣಿಯ ಭೈರವೀ ರಾಗದ ಆಲಾಪನೆಯೂ ನಿಂತುಹೋಗಿತ್ತು. ಅದರೊಡನೆ ವೃದ್ಧ ಭುಜಂಗರಾಯರೊಮ್ಮೆ ನಿಟ್ಟುಸಿರಿಟ್ಟು, 'ಮುರಿದ ಮುರಲಿಯಿಂದ ರಾಗದೊಸರು ಹರಿಯುವುದೇ?' ಎಂದಂದು, ಕರವಸ್ತ್ರದಿಂದ ಕಂಬನಿಯೊರೆಸಿದರು.



# ರಾಧೆಯ ಭಾಗ್ಯ

## ೧

೧೨—೪—೩೨.

ಅಪ್ಪಾ,

ನಾನಿಲ್ಲಿ ಇರಲಾರೆ. ತಾಳಲಸಾಧ್ಯವಾದ ದುಃಖ, ಶೋಕ, ಬೇನೆಗಳ ತವರ್ಮನೆಯಿದು. ಅನುದಿನವೂ ಕಿವಿ ದಣಿಯುವ ವರೆಗೆ ಅಲ್ಲಸಲ್ಲದ ಬಯ್ಗಳನ್ನು ಕೇಳಿ ಕೇಳಿ ಮನವಣಿಯಿತು. ಅಕ್ಕನ ಕಷ್ಟಗಳ ಬೇನೆಯ ಅರಿವನ್ನು ನೆನಹಿಗೆ ತಂದುಕೊಂಡು, ಕಂಡುಕೊಂಡು, ಅಳು ಬರುವಂತಾಯಿತು. ಆಕೆಯು ಪಡುವ ಬನ್ನವನ್ನು ವರ್ಣಿಸಲಾರೆ. ವರ್ಣಿಸಹೋದರೆ ಕಣ್ಣಿನಿಂದ ನೀರಿಳಿಯುವುದು. ಬೇಡ........ಅದರ ಗೋಜಿಗೇನೆ ಹೋಗಲಾರೆ.

ಅಪ್ಪಾ, ನಾನಿಲ್ಲಿ ಇನ್ನು ಇದ್ದು ಬಾಳಲಾರೆ. ಈ ವರ್ಷ ನನಗೆ ಮೆಟ್ರಿಕ್ಕು ಪರೀಕ್ಷೆ. ಅದಕ್ಕೂ ಇನ್ನೆರಡು ತಿಂಗಳುಗಳಿವೆ. ಅಂದಿನ ತನಕ ನಾನಿಲ್ಲಿ ಇರಲಾರೆ. ನಾನು ಬೇಗನೆ ಊರಿಗೆ ಬರುವೆನು. ನನಗೆ ವಿದ್ಯೆಯೂ ಅಗತ್ಯವಿಲ್ಲ. ಭಾವನೊಡನೆ ಇರುವುದೂ ಸಾಧ್ಯವಿಲ್ಲ.

ನಿನ್ನ ಕಿಟ್ಟು.

## ೨

ಕಿಟ್ಟೂ,

೧೫—೪—೩೨.

ನಿನ್ನ ೧೨ನೇ ತಾರೀಕಿನ ಕಾಗದವು ತಲಪಿತು. ಆದರೆ ಅಭಿಪ್ರಾಯವಾಗಲಿಲ್ಲ. ಏನೋ ಒಂದು ಒಗಟಿನಂತೆ ಬರೆದಿರುವೆ. ಬಹುಶಃ ಇದು ಊರ ಶಾಲೆಯಲ್ಲಿ ಕಲಿತ ವಿದ್ಯೆಯ ಪ್ರಭಾವವೋ ಏನೋ. ನಿನ್ನಕ್ಕನನ್ನು ಸತ್ಪಾತ್ರನಿಗೆ ಕೊಡಬೇಕೆಂದಿದ್ದೆ. ಅಂತೆಯೇ ಸರ್ವಗುಣ ಸಂಪನ್ನನಾದ ಗೋಪಾಲನಿಗೆ—ಎಂತಹ ಬಿರುದಿತ್ತು ಅವನಿಗೆ? ಬಿ. ಎ. ಬಿ. ಟಿ. ಯೊ—ಬಿ. ಎ. ಓ. ಟಿ. ಯೊ? ಏನೋ!—

ಅವನಿಗೆ ಕೊಟ್ಟೆ. ಆದರೂ ನಿನ್ನ ಕಾಗದದಲ್ಲಿ ಅಕ್ಕನಿಗೆ ಕಷ್ಟವೆಂದು ಬರೆದಿದ್ದಿ. ಎಂತಹ ಕಷ್ಟ? ಭಾವನೇನಾದರೂ ಚೆನ್ನಾಗಿಲ್ಲವೇ? ಹಾಗಿದ್ದಲ್ಲಿ ತಿಳಿಸು.

ಮೆಟ್ರಿಕ್ಕಿನಲ್ಲಿ ಎಂತಾದರೂ ತೇರ್ಗಡೆ ಹೊಂದಬೇಕೆಂಬ ಬಯಲಾಸೆಯಿಂದ ನಿನ್ನನ್ನು ಊರಿಗೆ ಕಳುಹಿದೆ. ಬಹಳ ಹಣವನ್ನು ವ್ಯಯಿಸಿದೆ. ಇನ್ನು ನೀನು ಕಲಿಯದೆ ಹಿಂದೆ ಬರುವಿಯಾದರೆ ನನ್ನ ಈ ಪ್ರಯತ್ನವು ನೀರಿನಲ್ಲಿ ಹೋಮಮಾಡಿದಂತಾಗುವುದು. ಚೆನ್ನಾಗಿ ವಿಚಾರಿಸು. ಕಣ್ಣಾರೆ ಕಂಡರೂ ಪರಾಂಬರಿಸಿ ನೋಡು.

ಕಿಟ್ಟೂ, ಭಾವನ ಮನೆ ದುಃಖಶೋಕದ ತವರ್ಮನೆಯೆಂದೆ. ಅದೇಕೆ? ನಾನು ನಿನ್ನಕ್ಕನನ್ನು ಅಲ್ಲಿಗೆ ಬಿಟ್ಟುಹೋದಾಗ ಆ ಮನೆಯು ಅರಮನೆಯಂತಿತ್ತು. ಅದೇನು ಮೂರು ತಿಂಗಳಲ್ಲೇ ಗುಡಿಸಲಾಗಿ ಪರಿಣಮಿಸಿತೇ? ಅಥವಾ ರೋಗಿಗೆ ಬೆಲ್ಲವೂ ಕಹಿಯಾಗುವುದೇ?

ಇತಿ, ಶ್ಯಾಮಣ್ಣ.

೩

ಅಪ್ಪಾ, ೧೮- -೪—೩೨.

ನಿನ್ನ ಪತ್ರವು ತಲಪಿತು; ಓದಿದೆ; ಅಚ್ಚರಿಯಾಯಿತು. ಭಾವನ ವಿಷಯದ ಆವ ಸಂಗತಿಯೂ ನಿನಗೆ ತಿಳಿಯದೆಂದು ತೋರುತ್ತದೆ. ವಿವರಿಸಿದರೆ ರಾಮಾಯಣವಾದೀತು. ಸಂಕ್ಷೇಪವಾಗಿಯೇ ತಿಳಿಸುತ್ತೇನೆ.

ಭಾವನು ದುರ್ಜನರ ಸಹವಾಸದಲ್ಲಿ ಬಿದ್ದಿರುತ್ತಾನೆ. ಹಿಂದೆ ಇದ್ದ ಗುಮಾಸ್ತರ ಕೆಲಸವೂ ಕೈತಪ್ಪಿ ಹೋಗಿದೆ. ಈ ಅವಸರದಲ್ಲಿ ಆ ದುಷ್ಟರೊಡನೆ ಮದ್ಯಪಾಯಿಯಾಗಿದ್ದಾನೆ. ಇನ್ನೂ ಹಲವಿದೆ.

ಅಪ್ಪಾ, 'ಸರ್ವಗುಣಸಂಪನ್ನ'ನೆಂದಿ. ಕಾರಣವೇನೋ ತಿಳಿಯುವುದಿಲ್ಲ. ಉದರ ನಿರ್ವಾಹಕ್ಕಿಲ್ಲದೆ, ನೀನು ನನಗೆ ಕೊಟ್ಟ ಹತ್ತು ರೂಪಾಯಿಗಳನ್ನು ತೆಗೆದುಕೊಂಡಿರುತ್ತಾನೆ. ಇತ್ತ ಇತ್ತ ನಡುರಾತ್ರಿಯಾದರೂ ಮನೆಗೆ ಬರುವುದಿಲ್ಲ.

ಮೊನ್ನೆ ಭಾವ ರಾತ್ರಿ ಎಲ್ಲಿ ಹೋಗುತ್ತಾನೆಂಬುದನ್ನು ತಿಳಿದು ಬರಲು ಅಕ್ಕ ನನ್ನನ್ನು ಕಳುಹಿಸಿದಳು. ನಾನು ಅವರ ಹಿಂದೆಯೇ ಹೋದೆ. ಅವರು ಚಾಮರಗಲ್ಲಿಯಲ್ಲಿನ ಒಂದು ಮನೆಯನ್ನು ಹೊಕ್ಕರು. ನೋಡಿದರೆ ಅದು ಚಂದ್ರಾವತಿ ನಾಯಕಸಾನಿಯ ಮನೆ. ಅಕ್ಕನು ಇದನ್ನು ಕೇಳಿ ಬಹಳವಾಗಿ ಅತ್ತಳು. ನನಗೂ ಅಳು ಬಂತು. ಆಕೆಯ ದುರದೃಷ್ಟಕ್ಕಾಗಿ ನೊಂದುಕೊಂಡೆ.

ಅಪ್ಪಾ, ನಿನ್ನೆ ಮದಿರಾಪಾನ ಮಾಡಿಕೊಂಡು ಮನೆಗೆ ಬಂದಿದ್ದ. ಗಂಟೆ ಹನ್ನೊಂದಾಗಿರಬಹುದು. ಅವನು ಕರೆದಾಗ ಅಕ್ಕ ಬಾಗಿಲು ತೆರೆಯಲಿಲ್ಲವಂತೆ. ಅದಕ್ಕಾಗಿ ಆ ನಡುರಾತ್ರಿಯಲ್ಲಿ ಕೈಯಲ್ಲಿದ್ದ ಕೋಲಿನಿಂದ (Walking Stick) ಆಕೆಯನ್ನು ಚೆನ್ನಾಗಿ ಹೊಡೆದ. ಅಬ್ಬಾ! ಅದನ್ನೀಗ ನೆನೆದರೂ ನನ್ನ ಮೈಗೆ ಮುಳ್ಳುಗಳೇಳುತ್ತವೆ. ಹಾಯ್! ಅಕ್ಕನ ಬೆನ್ನ ಮೇಲೆ ಬಾಸುಳಗಳೆದ್ದಿದ್ದುವು; ನೆತ್ತರೂ ಸುರಿಯುತ್ತಿತ್ತು.

ಇಂತಹ ಈ ನರಕಸದೃಶದ ಮನೆಯನ್ನು ದುಃಖ ಶೋಕಗಳ ತವರ್ಮನೆಯೆನ್ನದೆ ಮತ್ತೇನೆನ್ನಲಿ?

ಅಪ್ಪಾ, ಅಕ್ಕನ ಮೈಮೇಲೆ ನೀನು ಹಾಕಿಸಿದ ಆಭರಣಗಳೆಲ್ಲವೂ ಚಿನಿವಾರ ಕಟ್ಟೆಯನ್ನು ಕಂಡಿವೆ. ಕೊರಳಲ್ಲಿನ ಮಾಂಗಲ್ಯಸೂತ್ರವೊಂದಕ್ಕೆ ಕಾಲವೆಂದು ಬರುವುದೊ?

ಇನ್ನೊಂದು ಮಾತು. ಮೆಟ್ರಿಕ್ಕು ಪರೀಕ್ಷೆಗೆ ಇನ್ನೆರಡು ತಿಂಗಳಿವೆ. ಅಲ್ಲಿನ ವರೆಗೆ ತಾಳಲಾರೆ. ಬೇಕಾದರೆ ಪರೀಕ್ಷೆಯ ಸಮಯದಲ್ಲಿ ಬರಬಹುದು. ಪಾಠಗಳೆಲ್ಲಾ ಮುಗಿದಿವೆ. ಸಂಬಳವೆಲ್ಲವನ್ನೂ ತೆತ್ತಿರುತ್ತೇನೆ. ನಾಲ್ಕಾರು ದಿನಗಳಲ್ಲಿ ಹಿಂತಿರುಗಿ ಬರುತ್ತೇನೆ. ಬರುವಾಗ ಅಕ್ಕನನ್ನು ಭಾವ ಬಿಡಲಿ—ಅಥವಾ ಬಿಡದೆ ಇರಲಿ— ಕರೆದುಕೊಂಡೇ ಬರುತ್ತೇನೆ.

ಇತಿ, ಕಿಟ್ಟು.

೪

ಗೋಪಾಲ, ೨೧—೪—೩೨.

ಕ್ಷೇಮವೇ? ಇಲ್ಲಿ ಸರ್ವರೂ ಕ್ಷೇಮ. ರಾಧೆಯೆಂತಿದ್ದಾಳೆ?

ರಾಧೆಯನ್ನು ನಿನಗೆ ಕೊಟ್ಟಿದ್ದೇನೆ. ಆಕೆಯ ಸರ್ವ ಸುಖ ಸೌಭಾಗ್ಯಗಳ ಹಕ್ಕು ನಿನ್ನದು. ಆಕೆಯನ್ನು ನಿನಗೆ ಧಾರಾಪೂರ್ವಕ ವಾಗಿ ಕೊಟ್ಟಿರುವುದರಿಂದ ಆಕೆಯ ರಕ್ಷಣೆಯ ಕಾರ್ಯವು ನಿನ್ನದು. ಅದು ನಿನ್ನ ಕರ್ತವ್ಯ. ನೆನಪಿಗೆ ತಂದುಕೊ.

ವ್ಯಭಿಚಾರವೂ ಮದ್ಯಪಾನವೂ ನರಜೀವನದ ಅವನತಿಯ ಕೊನೆಯ ಎರಡು ಮೆಟ್ಟಲುಗಳು. ಅವುಗಳನ್ನಿಳಿಯಲಾರಂಭಿಸಿರುವೆ ಯೆಂಬುದರ ಅರಿವು ನನಗಿದೆ. ಇದು ನಿನ್ನನ್ನು ಪರಿ ಪರಿ ಗೋಳಾಡಿ ಸುವುದು. ಅವನ್ನು ತ್ಯಜಿಸು.

ರಾಧೆಯನ್ನು ನಿನಗೆ ದಾನವಾಗಿತ್ತರೂ ಆಕೆಯನ್ನು ಉಪೇಕ್ಷಣೆ ಮಾಡುವ ಹಕ್ಕು ನಿನ್ನದಲ್ಲ. ಆಕೆಯು ನಿನಗೆಂತು ಹೆಂಡತಿಯೋ ಅಂತೆಯೇ ನನಗೆ ಮಗಳಾಗಿರುವಳು. ನನಗೂ ಆಕೆಯ ಭದ್ರತೆಯ ವಿಚಾರದ ಹಕ್ಕಿದೆ.

ವ್ಯರ್ಥವಾಗಿ ಆಕೆಯನ್ನು ಗೋಳಾಡಿಸದಿರು. ಮತ್ತೂ ಕಷ್ಟ ವೀಯುವಿಯಾದರೆ ಕಾನೂನೂ ಇದೆ; ನಾನೂ ಇದ್ದೇನೆ.

ನಿನ್ನ ಮಾವ,
ಶ್ಯಾಮಣ್ಣ.

೫

ಅಪ್ಪಾ, ೨೫—೪—೩೨.

ಏಕೆ ಈ ರೀತಿಯಲ್ಲಿ ಭಾವನಿಗೆ ಕಾಗದ ಬರೆದಿ? ಅಕ್ಕನ ಗೋಳಾಟವನ್ನು ಹೆಚ್ಚಿಸುವುದಕ್ಕೆಂದು ತೋರುತ್ತದೆ.

ನಿನ್ನ ಕಾಗದವು ಮೊನ್ನೆ ಬಂದು ತಲ್ಪಿತು. ಭಾವನು ಓದಿದ.

ಕೋಪ ಬಂತೆಂದು ತೋರುತ್ತದೆ. ಮಾತನಾಡದೆ ಎಲ್ಲಿಗೋ ಹೊರಟು ಹೋದ.

ರಾತ್ರಿ ಬಂದವನು ಅಕ್ಕನ ವಿಚಾರಣೆಗಾರಂಭಿಸಿದ. ಈ ರೀತಿ ದೂರನ್ನು ಯಾರು ನಿನಗೆ ಕಳುಹಿಸಿದರು ಎಂದು. ಆತನು ಅಕ್ಕನನ್ನು ಕುರಿತು ನುಡಿದ ಅವಾಚ್ಯ ಶಬ್ದಗಳಿಗೆ ಮಿತಿಯಿಲ್ಲ. ಕೊನೆಗೆ ಆಕೆ ಯನ್ನು ಹೊಡೆಯಲಾರಂಭಿಸಿದ. ಅಪ್ಪಾ, ಅದನ್ನು ನಾನು ತಡೆಯ ಲಾರದಾದೆ. ಎದುರು ಹೋಗಿ ತಿಳಿಸಿದೆ. ನಾನು ಅದನ್ನೆಲ್ಲ ನಿನಗೆ ತಿಳಿಸಿದೆನೆಂದು. ಅನಂತರ ಮಾತಿಲ್ಲ.

ನಿನ್ನೆಯಿಂದ ಅಕ್ಕನೊಡನೆ ಸಮಾಧಾನವಾಗಿಯೇ ಇದ್ದಾನೆ. ನಿನ್ನೆ ಮಧ್ಯಾಹ್ನ ಅಕ್ಕನಿಗೊಂದು ಬೋರೀ ಸರವನ್ನೂ ಚಿನ್ನದ ಎರಡು ಜೋಡು ಬಳೆಗಳನ್ನೂ ತಂದು ಕೊಟ್ಟಿರುತ್ತಾನೆ.

ರಾತ್ರಿ ಏನೂ ಗಲಭೆಯಿದ್ದಿಲ್ಲ. ಬೇಗನೆ ಬಂದಿದ್ದ.

ಹೀಗೆಯೇ ಆದರೆ ಅಕ್ಕನ ದೈವವು ಕಣ್ಣು ತೆರೆಯಿತೆಂದೇ ಹೇಳಬೇಕು.

ಇತಿ,

ನಿನ್ನ ಚಿಟ್ಟು.

೬

ಅಪ್ಪಾ, ೨೭—೪—೩೨

ಘಾತವಾಯಿತು. ಪೋಲೀಸರು ಭಾವನನ್ನು ಜೈಲಿಗೆ ಕೊಂಡು ಹೋಗಿದ್ದಾರೆ. ಅಕ್ಕನು ದುಃಖಾಕ್ರಾಂತಳಾಗಿದ್ದಾಳೆ.

ಭಾವನು ಅಕ್ಕನಿಗೆ ತಂದಿತ್ತ ಬೋರೀ ಸರವೂ ಬಳೆಗಳೂ ಕಳವಿನ ಸಾಮಾನುಗಳಂತೆ. ಅಲ್ಲದೆ ನಿನ್ನೆ ರಾತ್ರಿ ಮನೆಗೆ ಬರುವಾಗ ಹನ್ನೆರ ಡರ ಮೇಲೆ ಒಂದು ಗಂಟೆಯಾಗಿತ್ತು. ಬಂದವನು ಮಲಗಿಕೊಂಡ. ಬೆಳಿಗ್ಗೆ ಎದ್ದು ಹೊರ ಹೊರಡುವಾಗ ಪೋಲೀಸಿನವರು ಹಿಡಿದರು.

ಅವನು ನಿನ್ನೆ ರಾತ್ರಿ ಬೇಂಕಿನಿಂದ ನೂರು ರೂಪಾಯಿ ಹತ್ತು

ನೋಟುಗಳನ್ನು ಕದ್ದನಂತೆ. ವಿಚಾರಣೆಯಾಗಿ, ಐದು ವರ್ಷಗಳ ಸಶ್ರಮ ಶಿಕ್ಷೆಯಾಯಿತು.

ಆತನು ಬೇಂಕಿನಲ್ಲಿ ಕಳವು ಮಾಡಿದನೆಂಬುದಕ್ಕೆ ಸಾಕ್ಷಿ— ಆತನು ನಂಬಿಕೊಂಡಿದ್ದ ಆಪ್ತಮಿತ್ರ—ಗೌರೀಶಂಕರ.

ನಿನ್ನ ಕಿಟ್ಟು.

೭

ಕಿಟ್ಟೂ,                                                            ೨೮—೪—೩೨.

ಮಿಂಚಿದ ಕಾರ್ಯಕ್ಕೆ ಚಿಂತಿಸಿ ಫಲವಿಲ್ಲ. ಅಕ್ಕನಿಗೆ ಸಮಾಧಾನಗೊಳಿಸಿ, ಬೇಗನೇ ಹೊರಟು ಬಾ.

ದುರಾತ್ಮನಿಕಾಯಿತು ತಕ್ಕ ಶಿಕ್ಷೆ.

ಶ್ಯಾಮಣ್ಣ.

೮

ಅಪ್ಪಾ,                                                            ೪—೫—೩೨

ಪತ್ರ ಬರೆಯಲು ಕೈ ನಡುಗುತ್ತದೆ; ಮೈ ಬೆವರುತ್ತದೆ. ಇಂದು ಹೊರಡುವುದೆಂದು ಆಲೋಚನೆ ಮಾಡಿಕೊಂಡಿದ್ದೆವು. ನಿನ್ನೆ ರಾತ್ರಿ ಅಕ್ಕನು ಏನೋ ವ್ಯಾಕುಲಳಾಗಿದ್ದಳು. ಭಾವನ ಚಿಂತೆಯಿಂದಿರಬಹುದೆಂದುಕೊಂಡಿದ್ದೆ. ಆದರೆ........

ಆದರೆ ಬೆಳಿಗ್ಗೆ ಎದ್ದು ನೋಡುತ್ತೇನೆ. ಅಕ್ಕನಿಲ್ಲ. ಎಲ್ಲಿಯೋ ಹೊರಗೆ ಹೋಗಿರಬಹುದೆಂದು ತಿಳಿದು, ನೀರು ಸೇದಲು ಬಾವಿಯ ಬಳಿಗೆ ಹೋಗಿ ಒಳಗಿಣಿಕಿ ನೋಡಲು:... ....ಹಾಯ್, ಅಪ್ಪಾ, ಬಾವಿಯಲ್ಲಿತ್ತು ಅಕ್ಕನ ಶವ...........

ಅಯ್ಯೋ, ದಂಡೆಯ ಮೇಲಿದ್ದ ಕಾಗದದಲ್ಲಿ ಹೀಗಿತ್ತು: 'ಕಳ್ಳನ ಪತ್ನಿಯು ತಂದೆಗೆ ಮೊಗತೋರಿಸಳು'. ಇಷ್ಟೆ.

ಅಪ್ಪಾ, ಹೆಚ್ಚು ಬರೆಯಲಾರೆ.

ನಿನ್ನ ಕಿಟ್ಟು.



# ಶಾಂತಿ

ಸಂಜೆಯಾಯಿತು. ಅಂಜಿ, ಅಂಜಿ ಮನೆಯೊಳ ಹೊಕ್ಕೆನು. ನಿಶ್ಶಬ್ದ! ಕಿವಿಗೊಟ್ಟಾಲಿಸಿದರೆ,—ಇನ್ನೂ ಭಯಂಕರ!! ಏನೋ ಒಂದು ವಿಶೇಷವು ಆಗಲಿದೆ. ಅದೂ ನನಗೆ ಹಿತಕರವಾದುದಲ್ಲ. ಭೀತಿಯು ಬಂದು ನನ್ನನ್ನು ಬೆದರಿಸಿತು. ಆದರೂ, ಮೆಲ್ಲನೆ, ನಿಶ್ಶಬ್ದವಾಗಿ, ಹೆಜ್ಜೆಯ ಮೇಲೆ ಹೆಜ್ಜೆಯನ್ನಿಕ್ಕಿ, ಮುನ್ನಡೆದೆನು. ಅಡುಗೆಯ ಮನೆಯ ಬೆಂಕಿಯ ಪ್ರಕಾಶವು ಹೊರಕ್ಕೂ ಪಸರಿಸಿತ್ತು; ಬಾಗಿಲು ತೆರೆದಿತ್ತು. ಮನೆಯು ನಿರ್ಜೀವವಲ್ಲ! ಪ್ರಾಣವಾಯು ಒಂದೆಡೆ ಶಾಂತವಾಗಿ ಕೂತಿದೆ. ಎಲ್ಲೆಲ್ಲಿಯೂ ನಿಶ್ಚಲ ಶಾಂತಿ. ನನ್ನ ಹೃದಯದಲ್ಲಿ ಮಾತ್ರ ಭಯಂಕರ ಗುಡುಗಿನಂತೆ ಗುಡುಗಾಡಿಸುವ ಆವುದೋ ಸದ್ದೊಂದು!......... ಮುಂದರಿದೆನು.

ಒಲೆಯ ಬುಡದಲ್ಲಿ ವ್ಯಕ್ತಿಯೊಂದು ಕುಳಿತಿದೆ; ಸ್ತ್ರೀವ್ಯಕ್ತಿ! ಬೆಂಕಿಯನ್ನೇ ದಿಟ್ಟಿಸಿ ನೋಡುತ್ತಿದೆ. ಅವಳ ಅಂದದ ಆನನದಲ್ಲಿ ಒಂದೆಡೆ ಶಾಂತಿಯು ನೆಲೆಗೊಂಡಿದೆ. ಇನ್ನೊಂದೆಡೆ ಬೇಸರವು ಕಂಗೊಳಿಸುತ್ತಿದೆ. ಧೈರ್ಯದಿಂದ, ಅವಳ ಬೆನ್ನ ಹಿಂದೆ ಬಂದು ನಿಂದೆನು. ಅವಳರಿಯಲಿಲ್ಲ; ನಾನೂ ಮಾತೆತ್ತಲಿಲ್ಲ. ತನ್ನ ಪತಿಯು ಬರುವ ವೇಳೆಯಾಯಿತೆಂದ್ಕು ಬಗೆದು ಎದ್ದು ನಿಂದಳು. ನನ್ನ ಮೈ ಸೋಕಿದಳು. ಎದೆನಡುಗಿ, ಹಿಂದಿರುಗಿ ನೋಡಿದಳು. ಬಳಿಯಲ್ಲಿ ಅದಾವ ನೀಚನು ಹೊಂಚುಹಾಕುತ್ತಿರುವುದು? ನಾನೇ,—ಕಮಲೆಯ ಕಾಂತ—ಕಮಲಾಕಾಂತ!

ಸಂತೋಷದ ಮುಗುಳ್ನಗು, ಆನಂದದ ಸವಿನುಡಿ, ನನ್ನನ್ನು ಸಂತೋಷಗೊಳಿಸಿದವು. ಭೀತಿಯು ಮಾಸಿತೆನ್ನಲೇ? ಇಲ್ಲ. 'ತರುವೆನೆಂದು ಹೇಳಿದ ಮುತ್ತಿನ ಸರವೆಲ್ಲಿ?" ಎಂಬ ನನ್ನ ನಲ್ಲೆಯ ನುಡಿಯು

ನನ್ನನ್ನಿನ್ನೂ ನಡುಗಿಸಿತು. 'ತರ....ಲಾಗ....ಲಿ....ಲ್ಲ' ಎಂದೆ. ನಡುಗುವ ನುಡಿಯೆಂದರಿತೆ. ಹೊರಟಿತು ಬಿರುಮಾತು! ಏನೆನ್ನಲಿ?

ಇಂದು ಇರುಳು ಸತಿಪತಿಯರ ಸರಸಸಲ್ಲಾಪವಿಲ್ಲ. ಕೋಪದ ತಾಪವು ಉಪಶಮನವಾಗಿಲ್ಲ. ಕಾಲಚಕ್ರಕ್ಕೆ ಕೋಪಿಸ್ಠರೆಂಬ ಭೇದ ಭಾವವಿಲ್ಲ. ಇಬ್ಬರಿಗೂ ಮಬ್ಬುಕವಿದುದು ತಿಳಿಯಲೇ ಇಲ್ಲ.

ಮರುದಿನ ಮುಂಜಾನೆ ಮೂಡಣ ದಿಸೆಯಲ್ಲಿ ಮೂಡುವನು ರವಿಯು! ನಾನು ಮಂಚದ ಮೇಲೊರಗಿರುವೆನು. ಕಣ್ದೆರೆದು ನೋಡಿದೆನು. ಗುಬ್ಬಚ್ಚಿಗಳೆರಡು ಗೂಡಿನ ಹೊರಬಂದು ಕುಳಿತಿರುವವು. ಅವು ತಮ್ಮೊಳಗೇ ಏನನ್ನೊ ಮಾತಾಡುತಿದ್ದಂತೆ ಕಂಡೆನು. ಹಕ್ಕಿಗಳೆರಡೂ ನಲಿದಾಡುತ್ತಿದ್ದವು. ನನ್ನ ಹೃದಯವು ಪರಿಪರಿಯ ಭಾವನೆಗಳಿಗೆ ರಂಗಸ್ಥಳವಾಯಿತು.

'ಈ ಗುಬ್ಬಿಗಳು ನನ್ನನ್ನು ಹೀಯಾಳಿಸುವವೇ? ನಾನು ನನ್ನ ಹೆಂಡತಿಗೆ ಒಂದು ಹಾರವನ್ನು ತಂದು ಕೊಡಲಾರದಾದೆನೆಂದು ನನ್ನನ್ನು ನಿಂದಿಸುವವೇ?........ಇಲ್ಲ. ಇವು ತಮ್ಮ ಆನಂದವನ್ನು ಸೂಚಿಸಿ ನಲಿಯುತ್ತಲಿವೆ. ನಮ್ಮಿರ್ವರೊಳಗೆ ಸರಿಯಾದ ಪ್ರೇಮವು ಉಳಿಯದುದರಿಂದ ನಮ್ಮನ್ನು ಹೀಯಾಳಿಸುವವೇ? ಎಂದು ಬಗೆದೆನು. ಅದರಲ್ಲೊ ಒಂದು ಬಗೆಯ ಸಂತೋಷ! ಆನಂದ!! ಪತ್ನಿಯನ್ನು ಕರೆದೆನು, 'ಕಮಲೇ' ಎಂದು. ಒಳಗಿಂದ ಸಿಡಿಮಿಡಿಗೊಂಡ ನುಡಿಯು ಹೊರಟಿತು.

'ಕಮಲೆ?......... ನಾನೇನು ದಾರಿಯಲ್ಲಿ ಹೆಕ್ಕಲು ಸಿಕ್ಕಿದವಳೇ ಒಂದು ಮೌಕ್ತಿಕಾಹಾರ ತನ್ನಿರೆಂದರೆ ತರಲಾಗಲಿಲ್ಲ!' ಇನ್ನೂ ನುಡಿವವಳಿದ್ದಳು.

'ಬಾರೆ! ನೋಡಿಲ್ಲಿ!! ಆನಂದದ ಹೊಸಮಿರುಗು ಮಿರುಗತೊಡಗಿದೆ!! ಎಂದೆನು ನಾನು.

ಏನೋ ವಿಶೇಷವಿರಬೇಕೆಂದು ಬಗೆದು ನನ್ನ ಬಳಿಗೆ ಬಂದು ನಿಂದಳು.

'ನೋಡು! ಆ ಗುಬ್ಬಿಗಳು ಸಂತಸದ ಗಾನವನ್ನು ಹಾಡುತ್ತಾ ನಲಿದಾಡುತ್ತಿವೆ. ನಿನ್ನನ್ನೂ ನನ್ನನ್ನೂ ಹೀಯಾಳಿಸುತ್ತಿವೆ—ಮನುಷ್ಯರಿಗೆ ಬುದ್ಧಿಯು ಹೆಚ್ಚಂತೆ! ಪಕ್ಷಿಗಳಷ್ಟೂ ಸಂತೋಷದಿಂದಿರಲು ಸಾಧ್ಯವಿಲ್ಲವೇ?' ಎಂದು '........ಸರಿ. 'ಪತ್ನಿಗೆ ಬೇಕಾದುದನ್ನು ತಂದು ಕೊಡಲು ನಿನಗಸಾಧ್ಯವಾಯಿತಲ್ಲ!' ಎಂದು ನಿಮ್ಮನ್ನು ನೋಡಿ ನಗುವವು. ನನ್ನನ್ನು ಕಂಡು ಮನಕರಗಿ ಕೂಗುತ್ತಿವೆ' ಎಂದು ಕಮಲೆ ಎಂದಳು.

'ಅದಲ್ಲ! ನೋಡು. ಮೈಯಲುಗಿಸುತ್ತಿವೆ, ಕೊರಳ ಕೊಂಕಿಸುತ್ತಿವೆ. ಏಕೆಂದು ಬಲ್ಲೆಯಾ? ಅವು ತಮ್ಮೊಳಗೆ 'ತಮ್ಮ ಮೈಯಲ್ಲಿ ಆಭರಣಗಳಿಲ್ಲ. ಪ್ರಕೃತಿ ಮಾತೆಯು ನಮಗಿತ್ತ ಆಭರಣವೇ ಆಭರಣವು! ಇನ್ನಿತರ ಚಿನ್ನದೊಡವೆಗಳು ನಮಗೆ ಬೇಕಿಲ್ಲ. ಸಂತೋಷದಿಂದ ನಲಿವೆವು! ಸಂಸಾರದ ಸುಖವನ್ನು ಅನುಭವಿಸುತ್ತಿರುವೆವು!! ಮನುಷ್ಯರೂ ಇಂತಿರಲಿ! ನಮ್ಮೊರ್ವರಂತೆ ಜಗಳಾಡುವುದು ಬೇಡವೆಂದು ನುಡಿಯುತ್ತಿವೆ........' ಎಂದು ಮನಕರಗುವಂತೆ ಹೇಳಿದೆನು.

ಕಮಲೆಯು ನಿಶ್ಚಲದೃಷ್ಟಿಯು ಜೋಡು ಹಕ್ಕಿಗಳನ್ನು ದಿಟ್ಟಿಸಿತು. ತನ್ನ 'ಪತಿದೇವನ ಭಾವನೆಯು ಸತ್ಯವೆಂದು ತಿಳಿದಳು. ಕಣ್ಣಲ್ಲಿ ಕಂಬನಿದುಂಬಿತು.

'ಕ್ಷಮಿಸುವಿರಾ?' ಎಂಬ ಪ್ರಶ್ನೆಯೊಂದು ಅಗಾಧ ಗುಹೆಯಿಂದ ಹೊರಟು ವ್ಯೋಮದಲ್ಲಿ ವಿಲೀನವಾಯಿತು

'ನಿಜವಾಗಿಯೂ!' ಎಂದು ನನ್ನ ಉತ್ತರ.

ಪ್ರಿಯೆಯ ಪ್ರೇಮದ ಪವಿತ್ರತೆಯನ್ನು ಅವಳ ಕಣ್ಣುಗಳೆರಡೂ ಸೂಚಿಸಿದವು. ಅವಳ ಮೃದುಲಬಾಹುಗಳು ನನ್ನನ್ನು ಬಂಧಿಸಿದವು.

ಎಲ್ಲವೂ ಶಾಂತಿಮಯ! ಆನಂದದ ಸುರಿಮಳೆ!!



# ನಿಮಂತ್ರಣ ಪತ್ರ

ಮನೋಹರನಿಗೆ ಇಂದೇನೋ ಒಂದು ರೀತಿಯಾಗಿತ್ತು. ಹಲವೊಮ್ಮೆ ಮೇಜಿನ ಮೇಲಿದ್ದ 'ಯಮುನ ಸೋಲ'ನ್ನೆತ್ತಿ ಕಣ್ಣೆದುರು ಹಿಡಿದು ಓದಹತ್ತುವನು. ನೂರು ಸಲ ಓದಿದಾಗಲೂ ಬಹಳ ರಸವತ್ತಾಗಿ ತೋರಿಬಂದ ಆ ಚಿಕ್ಕನಾಟಕವು ಇಂದು ಆತನಿಗೆ ನೀರಸವಾಗಿ ತೋರಿತು. ಅದನ್ನತ್ತ ಬಿಸುಟು, ನಡುಗುವ ಕೈಗಳಿಂದ ಶೇಕ್ಸ್‌ಪೀಯರ್ ಮಹಾಕವಿಯ 'ಹ್ಯಾಮ್ಲೆಟ್ಟ'ನ್ನೆತ್ತಿ ಓದತೊಡಗಿದ. ಛೆ! ಶೇಕ್ಸ್‌ಪೀಯರನೂ ಆತನ ಮನವೊಂದನ್ನು ಶಾಂತಗೊಳಿಸದಾದ. 'ಘುಸ್' ಎಂದುಸಿರು ಬಿಟ್ಟು, ಪುಸ್ತಕವನ್ನು ಮೇಜಿನ ಮೇಲೊಗೆದ. ಪಾಪ! ಹ್ಯಾಮ್ಲೆಟ್! ಮನೋಹರನ ರೋಷದಿಂದ ಅದು ಭಯಾಕ್ರಾಂತವಾಗಿ ಎಲ್ಲೋ ಅಡಗಿತು.

ಮನೋಹರನು ಆರಾಮಾಸನದ ಮೇಲೆ ಬಿದ್ದುಕೊಂಡು ಹತ್ತಿರವಿದ್ದ 'ಇಲೆಕ್ಟ್ರಿಕ್' ಬೀಸಣಿಗೆಯನ್ನು 'ಸ್ವಿಚ್' ಮಾಡಿದ. ಯಾವಾಗಲೂ ತಂಪೀಯುತ್ತಿದ್ದ ಆ ಬೀಸಣಿಗೆಯೂ ಆರಾಮಾಸನವೂ ಇಂದು ಬೇಗೆಯ ಜ್ವಾಲೆಗಳನ್ನು ಹರಡಿಸುತ್ತಿರುವಂತೆ ಭಾಸವಾಯಿತು. ಆಲಸ್ಯದಿಂದ ಆರಾಮಾಸನದಲ್ಲೇ ಅತ್ತಿತ್ತ ಹೊರಳಿದ. 'ಛೆ!' ಎಂದು ಸುರಿ ಎದ್ದ.

ಮೇಜಿನ ಮೇಲೊಂದು ಪತ್ರವು ಬಿದ್ದಿತ್ತು. ಅನನ್ಯಮನಸ್ಕನಾಗಿ ಮನೋಹರನು ಆ ಪತ್ರವನ್ನೆತ್ತಿದ. ಕ್ಷಣಕಾಲ ಅದನ್ನು ದಿಟ್ಟಿಸಿದ. ಹಲ್ಲುಗಡಿಯುತ್ತ ಅದನ್ನು ದೂರಕ್ಕೊಗೆದ. ಅದರಲ್ಲಿ ಹೀಗಿತ್ತು:-

'ಪ್ರೀತಿಯ ಗೆಳೆಯ,

ನಿನ್ನೊಲವಿನ ವಿನಾಯಕನ ವಂದನೆಗಳು.

ನಿನಗೆ ಬಿಡುವಿದ್ದರೂ ಮನೆಯ ಕಡೆ ತಿರುಗದಿರುವುದನ್ನು ಕಂಡು ನನಗೆ ಬೇಸರವಾಗಿದೆ. ಊರಲ್ಲೇ ಇರಲು ಕಾರಣವೇನೋ ನಾನರಿಯೆ. ಬಹುಶಃ ಲಲಿತೆಯು ಹಾಸ್ಟೆಲಿನಲ್ಲಿ ನಿನಗೆ ನಾಳೆ ನೋಡಸಿಗುವೆನೆಂದು ತಿಳಿಸಿರಬಹುದು. ಅದರೆ ಆಕೆಯ ಆಸೆಯನ್ನು ನೀನು ಬಿಟ್ಟುಬಿಡುವುದು ಲೇಸು. ಲಲಿತೆಯ ವಿವಾಹದ ನಿಷ್ಕರ್ಷೆಯಾಗಿದೆ.

ನಿನ್ನೆ ಸಂಜೆ ರಾಮರಾಯರೂ ಅವರ ಮಗನೂ ಕನ್ಯಾರ್ಥಿಯಾಗಿ ಲಲಿತೆಯ ಮನೆಗೆ ಬಂದಿದ್ದರು. ಲಲಿತೆಯ ಪರೀಕ್ಷೆಯು ನಡೆಯಿತಂತೆ; ವರದಕ್ಷಿಣೆಯನ್ನೇನೂ ಕೊಳ್ಳದೆ ವಿವಾಹವಾಗಲೂ ಒಪ್ಪಿರುವರು. ದಿನ ನಿಶ್ಚಯಿಸಲು ಇಂದು ಸುಬ್ಬಾಜೋಯಿಸರಲ್ಲಿ ತೆರಳುವವರಿದ್ದಾರೆ. ಮನೂ, ಇದನ್ನು ಲಲಿತೆಯೇ ಇಂದು ತಿಳಿಸಿದ್ದಳು.

ಮನೂ, ಆಕೆಯು ನಾಳೆ ನಿನ್ನ ಹೋಸ್ಟೆಲಿಗೆ ಬರಲಾರಳು. ಕಾರಣವಿಷ್ಟೆ—ಆಕೆಯು ಇಂದಿನಿಂದ ನಿನಗೆ ಪರಕೀಯಳು.

ಗೆಳೆಯ; ಮರೆತೆ. ಈ ಪತ್ರವು ತಲುಪಿದ ಅರೇ ತಾಸುಗಳಲ್ಲಿ ನಿಮಂತ್ರಣ ಪತ್ರಿಕೆಯೊಂದು ನಿನ್ನ ಕೈಸೇರಬಹುದು.

ಇಂದಿಗೆ ಇಷ್ಟೆ; ಮುಂದೆ ಬರೆಯುವೆ.

ನಿನ್ನೊಲವಿನ ವಿನಾಯಕ.'

ಅದುವೇ ಮನೋಹರನ ಉದ್ವಿಗ್ನತೆಗೆ ಕಾರಣ. ಲಲಿತೆಯು ಕಾಲೇಜಿನಲ್ಲಿ ಆತನ ಸಹಪಾಠಿನಿ. ಚೆಲುವೆಯಾದುದರಿಂದ ಮನೋಹರನ ಮನವನ್ನು ಹರಿಸಿದ್ದಳು.

ಮನೋಹರನು ಆಕೆಯೊಡನಿರುವುದರಲ್ಲೇ ಸಂತಸವನ್ನಾಂತಿರುತ್ತಿದ್ದ. ಆಕೆಯೊಡನೆ ವಿನೋದವಾಗಿ ವಿಹರಿಸುವುದೇ ತನ್ನ ಜೀವನದ ಧ್ಯೇಯ; ಆಕೆಯೊಡನೆ ಪಾರ್ಕಿನಲ್ಲಿಯೋ ಬಾವಟೆ ಗುಡ್ಡೆಯಲ್ಲಿಯೋ ಅಲೆದರೆ ಅದೇ ಆತನಿಗೆ ಸ್ವರ್ಗ. ತನ್ನ ವ್ಯಾಸಂಗದೊಡನೆ ಆಕೆಗೆ ವಿವರಿಸುವುದರಲ್ಲೇ ಇದೆ ಆತನ ಜೀವನದ ಸಾರ್ಥಕತೆ; ಎಂದೆ

ಣಿಸಿ ನಲಿಯುತ್ತಿದ್ದ ಆತನ ಮನಸ್ಸು ವಿನಾಯಕನ ಪತ್ರವನ್ನೋದಿ ಬೇಯುತ್ತಿತ್ತು.

ಮನೋಹರನು 'ಡ್ರಾವರ'ನೊಳಗಿಂದ ಒಂದು ಭಾವಚಿತ್ರವನ್ನೆತ್ತಿದ. ಅದೇ ಲಲಿತೆಯದಾಗಿತ್ತು. ಹಠಾತ್ ಕಣ್ಣುಗಳು ಅಶ್ರುಪೂರ್ಣವಾದುವು. ಆತನು ಯೋಚಿಸತೊಡಗಿದ. 'ಅಯ್ಯೋ, ಲಲಿತೆಯು ನನ್ನನ್ನು ಮರೆತಳೆ? ನಾನು ಅರ್ಪಿಸಿದ ಪ್ರೇಮಕ್ಕೆ ತಿರಸ್ಕಾರವೇ ಫಲವೇ? ಆಕೆಯು ಕಳೆದ ಹುಟ್ಟಿದ ಹಬ್ಬದ ದಿನ ಜರಿಯ ರವಕೆಯನ್ನು ಉಡುಗೊರೆಯಾಗಿ ಕೊಡಲಿಲ್ಲವೇ?' ಮನೋಹರನಿಗೆ ಜಗತ್ತು ಶೂನ್ಯವಾಗಿ ತೋರಿತು.

ಕತ್ತಲು ಜಗತ್ತನ್ನಾಕ್ರಮಿಸಿತು. ಮನೋಹರನು ಕಾತರನಾಗಿದ್ದನು. ವರ್ಷಾಕಾಲವಾದುದರಿಂದ ಆಗಸವನ್ನು ಮೇಘಮಾಲೆಗಳು ಮರೆಯಾಗಿರಿಸಿದ್ದುವು. ಮನೋಹರನ ಹೃದಯಾಕಾಶದಲ್ಲಿಯೂ ಅನಂತ ಕಾರ್ಮೋಡಗಳು ಮುಸುಕಿದ್ದುವು.

ಮೆಲ್ಲನೆದ್ದು ದೀಪವನ್ನು ಹಚ್ಚಿದ ಮನೋಹರ. ಅಲ್ಲೇ ಆರಾಮಾಸನಕ್ಕೊರಗಿದ. ಏನನ್ನೋ ಯೋಚಿಸುತ್ತಿತ್ತು ಆತನ ಮನಸ್ಸು. ಕಣ್ಣುಗಳು ತಮ್ಮಷ್ಟಕ್ಕೆ ನಿಮೀಲಿತವಾದುವು.

'ಮನೋಹರ!' ಹಾ! ಮನೋಹರನು ಕಣ್ಣುತೆರೆದು ನೋಡಿದ. ದ್ವಾರದಲ್ಲಿ ಸ್ವಯಂ ಲಲಿತೆಯೇ ನಿಂತಿದ್ದಳು.

ಮನೋಹರನು ಕಣ್ಣೊರಸಿಕೊಂಡು ನೋಡಿದ. ಆಕೆಯು ಲಲಿತೆಯೇ! ನಿಶ್ಚಯ! ಮನೋಹರನೆದ್ದ. 'ಲಲಿತಾ! ವಿನಾಯಕನ ಪತ್ರ ತಲುಪಿತು. ಏಕೆ ಬಂದೆ?'

ಲಲಿತೆಯ ಮೊಗದ ಮೇಲೊಮ್ಮೆ ಮೃದುಹಾಸವು ಮಿಂಚಿತು. 'ಗೆಳೆಯ; ಈ ನಿಮಂತ್ರಣ ಪತ್ರಿಕೆಯನ್ನೀಯಲು ಬಂದಿರುತ್ತೇನೆ.'

ಮನೋಹರನು ನಿಮಂತ್ರಣ ಪತ್ರಿಕೆಯನ್ನು ಕೈಗೆತ್ತಿದ. ಆದರೆ ಓದಲಿಲ್ಲ. 'ಗೆಳೆಯ, ವಿವಾಹಕ್ಕೆ ಬಾರದಿರಬೇಡ . . . ಉಡುಗೊರೆಯೇನನ್ನು ತರುವೆ?'

ಮನೋಹರನು ದಿಙ್ಮೂಢನಾದ. ಪತ್ರಿಕೆಯನ್ನು ಮೇಜಿನ ಮೇಲೊಗೆದ. ಪ್ರೇಮಿಯೊಬ್ಬನ ಪ್ರೇಮವನ್ನು ತರಿದು, ಕರುಳು ಕತ್ತರಿಸಿ, ಕೊನೆಗೆ ಉಡುಗೊರೆ! 'ಲಲ್ಲಿ; ನೀನು ಹೋಗು; ಈ ಮನೋಹರನಿಗೆ ಹುಚ್ಚು ಹಿಡಿದಿದೆ . . . '

ಲಲಿತೆಯು ನಕ್ಕಳು; ಹೊರಹೊರಟಳು.

ಮನೋಹರನು ಸ್ತ್ರೀಯರ ಚಾಂಚಲ್ಯಕ್ಕೆ ತಲೆದೂಗಿದ. ಒಮ್ಮೆ ತನ್ನನ್ನು ಮಡದಿಯಾಗುವೆನೆಂದು ವಂಚಿಸಿ, ಕೊನೆಗೆ ಕೈಗೊಟ್ಟಳಲ್ಲ! ತನ್ನ ಈ ಮೂರ್ಖತನಕ್ಕೆ ಏನೆನ್ನಬೇಕು? ಲಲಿತೆಯನ್ನು ವಿವಾಹವಾಗುವ ಯೋಚನೆಯಿದೆ ಎಂದು ತಾಯಿಯೊಡನೆಯೂ ತಿಳಿಸಿದ್ದನು. ಈಗ ಅದು ನೀರಿನಲ್ಲಿಯ ಹೋಮವಾದುದನ್ನು ಕಂಡು, ಆಕೆಯೇನೆನ್ನಬಹುದು? ತನ್ನ ಮೂರ್ಖತನಕ್ಕೆ ಆಕೆಯು ಎಷ್ಟೊಂದು ಹೀನಯಿಸಬಹುದು?

ಮನೋಹರನಿಗೆ ಇನ್ನು ತನ್ನ ಜೀವನದಲ್ಲ ಬೆಳಕಿಲ್ಲವೆಂದು ತೋರಿಹೋಯಿತು. ಇನ್ನು ತಾನು ಜೀವಿಸಿದ್ದು ಪ್ರಯೋಜನವಿಲ್ಲ. ಯಾರಿಗಾಗಿ ಜೀವಿಸಬೇಕು? ಏತಕ್ಕಾಗಿ ಜೀವಿಸಬೇಕು? ಲಲಿತೆಯು ದೂರವಾದಳು. ತಾಯಿ! ಆಕೆಗೆ ನನ್ನಿಂದೇನೂ ಸುಖವೀವುದು ಸಾಧ್ಯವಾಗಲಿಲ್ಲ. ಮತ್ತೇಕೆ ತಾನು ಜೀವಿಸಿರಬೇಕು?

ಮನೋಹರನು ಎದ್ದ. ಕೋಣೆಯಲ್ಲೇ ಒಂದು ಕಪಾಟಿತ್ತು ಅದರ ಬಾಗಿಲನ್ನು ತೆರೆದ. ಅದರಲ್ಲಿ ಅನೇಕ ಬಾಟಲಿಗಳು ಇಡಲ್ಪಟ್ಟಿದ್ದವು. ಅವುಗಳಲ್ಲೊಂದು ಬಾಟಲಿಯನ್ನೆತ್ತಿದ ಮನೋಹರ. ಅದರ ಮೇಲಿನ ಹೆಸರನ್ನೋದಿದ. 'ಸಲ್ಫ್ಯೂರಿಕ್ ಎಸಿಡ್'.

ಸ್ಥಿರಮನಸ್ಕನಾಗಿ ಮನೋಹರನು ಆ ಸೀಸೆಯನ್ನೆತ್ತಿದ. ಮುಚ್ಚಳವನ್ನು ತೆರೆದ. ದೃಷ್ಟಿಯು ನಿಮಂತ್ರಣ ಪತ್ರಿಕೆಯ ಮೇಲೂ, ಲಲಿತೆಯ ಭಾವಚಿತ್ರದ ಮೇಲೂ ಬಿತ್ತು. 'ದೇವಾ, ಆತ್ಮಹತ್ಯೆಗೈಯ್ಯುವುದಕ್ಕಾಗಿ ಕ್ಷಮಿಸೆಂದ. ಸೀಸೆಯನ್ನು ಮೇಲಕ್ಕೆತ್ತಿದ.

ಹಠಾತ್ ಹಸ್ತಪ್ರೊಂಡರ ಆಘಾತದಿಂದ ಸೀಸೆಯು ನೆಲಕ್ಕುರು ಳಿತು. ಅದರಲ್ಲಿನ ದ್ರವವು ನೆಲದ ಮೇಲೆ ಪಸರಿ ಕುದಿಯಲಾರಂಭಿಸಿತು. ಮನೋಹರನು ಹಿಂದಿರುಗಿ ನೋಡಿದ. ಲಲಿತೆ! 'ಇದೇನನ್ನು ಮಾಡಿದೆ ಲಲ್ಲಿ?' ದನಿಯು ಕರ್ಕಶವಾಗಿತ್ತು.

'ಏನಿಲ್ಲ; ಆತ್ಮಹತ್ಯೆಯೊಂದನ್ನು ತಪ್ಪಿಸಿದೆ.' ಲಲಿತೆಯು ನಕ್ಕಳು.

'ಆದರೆ ನನಗೆ ನೀನಿಲ್ಲದ ಜಗತ್ತು ಶೂನ್ಯ.'

ಲಲಿತೆಯ ಮೊಗದಲ್ಲಿ ನಗು! 'ಇನ್ನೇಕೆ ಮುಚ್ಚುಮರೆ? ಗೆಳೆಯ; ನಿಮಂತ್ರಣ ಪತ್ರವನ್ನು ನೋಡಿದೆಯಾ?' ಲ ಲಿ ತೆ ಯು ನಿಮಂತ್ರಣ ಪತ್ರಿಕೆಯನ್ನು ಬಿಡಿಸಿದಳು. 'ಚಿ। ಮನೋಹರನು . . . . ಸೌ। ಲಲಿತೆಯನ್ನು . . . .' ಲಲಿತೆಯು ಮತ್ತೊಮ್ಮೆ ನಕ್ಕಳು. ನಿನ್ನ, ತಾಯಿಯ ಒಪ್ಪಿಗೆಯಿಂದ ವಿವಾಹವು ನಿಶ್ಚಯವಾಯಿತು.'

'ಹಾಗಾದರೆ ವಿನಾಯಕನ ಕಾಗದ?'

ಲಲಿತೆಯು ಮತ್ತೊಮ್ಮೆ ನಕ್ಕಳು. 'ವಿನೋದಕ್ಕಾಗಿ ಹಾಗೆಂದು ಬರೆದೆವು!'

ಮನೋಹರನು ಲಲಿತೆಯ ಕೈಯನ್ನೆದೆಗೊತ್ತಿಕೊಂಡ. 'ಲಲ್ಲಿ; ಕ್ಷಮಿಸುವೆಯಾ?'





# ನವಜೀವಾತು ಎಂಬ ಸೂತಿಕಾ ರಸಾಯನ

(ಇದು ರಿಜಿಸ್ಟರು ಮಾಡಲ್ಪಟ್ಟಿದೆ)

ಬಾಣಂತಿಯರ ಸಲುವಾಗಿಯೇ ಉಂಟುಮಾಡಿದ ದೇಶ ಮತ್ತು ಪ್ರಕೃತದ ದೇಹಸ್ಥಿತಿಯನ್ನು



ನಿರ್ಣಯಿಸಿ ಆಯುರ್ವೇದದ ಆಧಾರದಿಂದ ತಯಾರಿಸಲ್ಪಟ್ಟ

## ಅಪೇಕ್ಷಣೀಯವಾದ ಮಧುರ ದ್ರವರಸಾಯನ.

ಹೆತ್ತಂದಿನಿಂದ ೪೫ ದಿವಸಗಳ ತನಕ ಈ ರಸಾಯನವನ್ನು ಸೇವಿಸಬೇಕು

## ನವಜೀವಾತುವಿನ ಪ್ರಯೋಜನ.

ಗರ್ಭಕೋಶದಲ್ಲಿ ಸಂಗ್ರಹವಾಗಿರುವ ಅಥವಾ ರೂಕ್ಷಧರ್ಮದಿಂದ ನಾಡಿಗಳಲ್ಲಿ ಸ್ತಬ್ಧವಾಗಿರುವ ದುಷ್ಟರಕ್ತವನ್ನು ಕಾರಣಾಂತರದಿಂದ ಅವಶಿಷ್ಟವಾಗಿ ಉಳಿದಿರುವ ಕಸದ ಅಂಶವನ್ನು ಹೊರಗೆ ಹಾಕುವುದು. ಗರ್ಭಕಾರಣದಿಂದ ರಕ್ತನಾಡಿಗಳಲ್ಲಿ ದ್ರವಾಂಶವು ಅಧಿಕವಾಗಿದ್ದರೆ ಶೋಧಿಸುವುದು. ಮತ್ತು ಗರ್ಭಕೋಶವನ್ನು ಸಂಕೋಚಿಸಿ ಸ್ವಸ್ಥಾನದಲ್ಲಿರಿಸುವುದು. ಉತ್ತರೋತ್ತರ ಜೀರ್ಣಶಕ್ತಿಯನ್ನು ಅಧಿಕಮಾಡಿ ರಸ ರಕ್ತ ಮತ್ತು ಮಾಂಸಾದಿ ಧಾತುಗಳನ್ನು ಅಧಿಕವಾಗಿ ಮಾಡಿ ಪುಷ್ಟೀಕರಿಸುವುದು. ಸ್ತನ್ಯವನ್ನು ಹೆಚ್ಚಿಸುವುದು. ಅಲ್ಲದೆ ಬಾಣಂತಿತನವನ್ನು ಮರೆಯಿಸಿ-ಯೌವನದ ಸೊಬಗನ್ನು ಬೆಳಗಿಸುವುದು.

## ಅಲ್ಪ ಮೌಲ್ಯದಿಂದ ಬಡವರಿಗೂ ಭಾಗ್ಯಶಾಲಿಗಳಿಗೂ ಸುಲಭ್ಯವಾಗಿರುವುದು

ಎಂಟು ಔನ್ಸಿನ ೨ ಬಾಟ್ಲಿಗಳು ಹೆಚ್ಚು ಕಡಿಮೆ ೪೫ ದಿವಸಗಳಿಗೆ ಬರುವುದು. ಅಂದರೆ ಕೇವಲ ೪—೦—೦ ರೂಪಾಯಿಗಳೇ ಒಂದು ಬಾಣಂತಿತನಕ್ಕೆ ಸಾಕಾಗುವುದು. ವಿಶೇಷ ಮಾಹಿತ್ಯಕ್ಕೆ ಈ ಕೆಳಗಿನ ವಿಳಾಸಕ್ಕೆ ಬರೆಯಿರಿ—

ಯಮ್. ವಿ. ಶಾಸ್ತ್ರಿ,
ಆಯುರ್ವೇದ ಭೂಷಣ,
ಪೋಸ್ಟು, ಮಂಗಳೂರು, ದ. ಕ.

# ಸೀತಾರಾಮ್
## ಎಮ್. ಕೆ. ವೈದ್ಯರ
# ಕಸ್ತೂರಿ ಮಿಶ್ರಿತ ಸೂತಿಕಾ ರಸಾಯನ

ಈ ರಸಾಯನವು ಇತರ ಆಸವ, ಅರಿಷ್ಟ, ಅವಲೇಹ, ಘೃತ ಮೊದಲಾದುವುಗಳಿಗಿಂತಲೂ ಮಿಗಿಲೆನಿಸುತ್ತದೆ. ಬಾಣಂತಿಯರಿಗೆ ಸಿದ್ಧೌಷಧ

ಬಾಣಂತಿಯು ರೋಗಿಯಲ್ಲವಾಗಿದ್ದರೂ ಪ್ರಸವ ಕಾಲದಲ್ಲಿ ಅಜಾಗ್ರತೆಯಿಂದ ಉಂಟಾದ ಅವಘಡಗಳು ದೇಹದಲ್ಲಿ ನೆಲೆಗೊಂಡು ಅನೇಕ ರೋಗಗಳಿಗೆ ಇಂಬುಕೊಡುತ್ತವೆ. ಮಗುವು ಗರ್ಭಕೋಶದಿಂದ ಹೊರಬಿದ್ದ ನಂತರ ಕಸವು ಸರಿಯಾಗಿ ಹೊರಗೆ ಬೀಳಬೇಕು. ದುಷ್ಟರಕ್ತವು ಹೋಗಬೇಕು. ಶುದ್ಧರಕ್ತವು ವಿಶೇಷವಾಗಿ ಸ್ರವಿಸಕೂಡದು.

ಆದುದರಿಂದ ಗರ್ಭಿಣಿಯರು ಕೆಲವು ನಂಜಿನ ಮಾತ್ರೆಗಳನ್ನೂ, ಒಂದು ಸೀಸೆ ಮಿಶ್ರಣವನ್ನೂ ಸಂಗ್ರಹಿಸಿಟ್ಟುಕೊಂಡಲ್ಲಿ, ಪ್ರಸವವು ಸುಖತರವಾಗಿ ಪರಿಣಮಿಸಿ ಅಪಾಯ ಮಾರ್ಗವೇ ಇಲ್ಲದಂತಾಗುವುದು. ಅಲ್ಲದೆ ಬಾಣಂತಿಯರ ಅತಿಸಾರ, ಜ್ವರ, ಅರುಚಿ, ಅಜೀರ್ಣ, ವಾಂತಿ, ಮೂತ್ರರೋಗ, ಮೊದಲಾದ ಎಲ್ಲಾ ರೋಗಗಳನ್ನು ನಿವಾರಿಸಿ, ಕೆಟ್ಟ ರಕ್ತವನ್ನು ಶುದ್ಧೀಕರಿಸಿ, ಪುಷ್ಟಿಯನ್ನೂ ಚಟುವಟಿಕೆ, ಕಾಂತಿ, ಸೌಂದರ್ಯಗಳನ್ನೂ ಉಂಟುಮಾಡುವುದು.

ಪಥ್ಯ—ಬಾಣಂತಿಯು 10 ರಾತ್ರಿಯ ತನಕ ಅರೆಹೊಟ್ಟೆ ಅನ್ನವನ್ನು 2 ಸಲ ಊಟಮಾಡತಕ್ಕದ್ದು. ಬಾಯಾರಿದರೆ ಯೋಗ್ಯವೆನಿಸುವ ಕ್ವಾಥಗಳನ್ನು ಕೊಡಬಹುದು. ಧನ್ವಂತರೀ ತೈಲವನ್ನು ಹಚ್ಚಿ ಕಷಾಯ ನೀರಿನಿಂದ ಸ್ನಾನಮಾಡಿಸಿ ತ್ವಗ್ದೋಷನಾಶಕ ಚೂರ್ಣದಿಂದ ಮೈಯನ್ನು ತಿಕ್ಕತಕ್ಕದ್ದು. ಆದುದರಿಂದ ಬಾಣಂತಿಯರು ಇರುವ ಗೃಹಗಳಲ್ಲಿ ಈ ರಸಾಯನವು ಅವಶ್ಯವಾಗಿ ಇರಲೇಬೇಕು.

ಕ್ರಯ ಸೀಸೆ 1ಕ್ಕೆ 2-0-0. ನಂಜಿನ ಮಾತ್ರೆ 6ಕ್ಕೆ 6 ಆಣೆ.

**ಯಂ. ಕೆ. ವೈದ್ಯ,**

ಮಿಶನ್ ಹ್ಯಾಸ್ಕೂಲ್ ರಸ್ತೆ, ಮಂಗಳೂರು.